# ತೀರ್ಥ ಶ್ರಾದ್ಧ ವಿಧಾನ

(ತೀರ್ಥಕ್ಷೇತ್ರಗಳ ಮಹಿಮಾ ಶ್ಲೋಕಗಳ ಸಹಿತ)



ಗಯಾ ಗದಾಧರ (ಗಯಾ ಕ್ಷೇತ್ರ)

ಸಂಪಾದಕರು

ಶ್ರೀನಿವಾಸ ಮಠದ

ಹರೇ ಶ್ರೀನಿವಾಸ ಪೂಜಾ ಭಂಡಾರ

ರಾಯಚೂರು

# ತೀರ್ಥ ಶ್ರಾದ್ಧ ವಿಧಾನ

(ತೀರ್ಥಕ್ಷೇತ್ರಗಳ ಮಹಿಮಾ ಶ್ಲೋಕಗಳ ಸಹಿತ)

ಸಂಪಾದಕರು
ಶ್ರೀನಿವಾಸ ಸು. ಮಠದ

ಹರೇ ಶ್ರೀನಿವಾಸ ಪೂಜಾ ಭಂಡಾರ
ರಾಯಚೂರು

TEERTHAŚRADDHA VIDHAN
By Srinivas S. Mathad, B.Sc, M.A
Recipient of "Parimala Prashasti", "Jnanajyoti Award" and "Das Sahitya Seva Praveena".
Bengaaluru (M) : 99720 78061

First Edition : 2011
Second Edition : 2016

Copies : 1000

Pages : 80



Publishers : Hare Shrinivas Pooja Bhandar
Near Hanuman Talkies
RAICHUR
Mobile : 9845726209

*Printers :*
Ravindra S. Akalwadi
Manohar Printing Press
Old Dalal Street,
Market, **DHARWAD - 1**
Phone : 2790030, 2741984
Mobile : 91412 01170

ಶ್ರೀ ಗೋವಿಂದರಾಜೋ ವಿಜಯತೇ

# ಆಶೀರ್ವಚನ

ತೀರ್ಥಕ್ಷೇತ್ರಗಳಿಗೆ ಹೋದಾಗ ಮೃತರಾದ ತಂದೆ-ತಾಯಿಗಳನ್ನು ಕುರಿತು ತೀರ್ಥಶ್ರಾದ್ಧವನ್ನು ಮಾಡಬೇಕಾದುದು ಪುತ್ರನ ಅವಶ್ಯ ಕರ್ತವ್ಯವಾಗಿದೆ.

ಈ ಕಾರಣದಿಂದ "ತೀರ್ಥಶ್ರಾದ್ಧ"ದ ವಿವರಣ ರೂಪಾತ್ಮಕವಾದ ಚಿಕ್ಕ ಹೊತ್ತಿಗೆಯನ್ನು ನಮ್ಮ ಶಿಷ್ಯ ಶ್ರೀ ಶ್ರೀನಿವಾಸ ಸು. ಮಠದನು ಸಂಪಾದಿಸಿದ್ದಾನೆ. ಇದರಲ್ಲಿ ತೀರ್ಥಗಳಿಗೆ ಹೋದಾಗ ಮಾಡಬೇಕಾದ ಕ್ಷೌರಸಂಕಲ್ಪ, ಸ್ನಾನ ಸಂಕಲ್ಪ ಇತ್ಯಾದಿಗಳನ್ನು ಅಳವಡಿಸಿದ್ದಲ್ಲದೇ, ಆಯಾ ತೀರ್ಥಕ್ಷೇತ್ರಗಳ ಮಹಿಮಾ ಶ್ಲೋಕಗಳನ್ನು ಶ್ರೀವಾದಿರಾಜ ಪೂಜ್ಯಚರಣರ "ತೀರ್ಥ ಪ್ರಬಂಧ" ಗ್ರಂಥದಿಂದ ಆಯ್ದು ಕೊಟ್ಟಿದ್ದಾನೆ. ಇದು ತುಂಬಾ ಉಪಯುಕ್ತವಾಗಿದೆ. ಸಜ್ಜನರು ಈ ಗ್ರಂಥದ ಉಪಯೋಗ ಮಾಡಿಕೊಂಡು ಶ್ರೀ ಮಧ್ವವಲ್ಲಭ ಶ್ರೀಮಜ್ಜನಾರ್ದನ ಸ್ವಾಮಿಯ ಅನುಗ್ರಹಕ್ಕೆ ಪಾತ್ರರಾಗಬೇಕು.

ಈ ಕೃತಿಯನ್ನು ಸಂಪಾದಿಸಿದ ಶ್ರೀನಿವಾಸ ಸು. ಮಠದ ಈತನಿಗೆ ಜ್ಞಾನ, ಭಕ್ತಿ, ವೈರಾಗ್ಯಾದಿಗಳು ಲಭಿಸಲಿ ಎಂಬುದಾಗಿ ಶ್ರೀಬಾದರಾಯಣಾಭಿನ್ನ ಶ್ರೀಗೋವಿಂದರಾಜರಲ್ಲಿ ಪ್ರಾರ್ಥಿಸುತ್ತೇವೆ.

ವಿಜಯಪುರ
19-3-2011

ಪಂ॥ ತ್ರಿವಿಕ್ರಮಾಚಾರ್ಯ ಉಮರ್ಜಿ
ವಿಜಯಪುರ

॥ ಶ್ರೀಃ ॥

# ಲೇಖಕನ ನುಡಿ

ಭಗವಂತನ ಪ್ರೇರಣೆಯಂತೆ 'ತೀರ್ಥಶ್ರಾದ್ಧ'ದಲ್ಲಿ ತೀರ್ಥಯಾತ್ರೆಗೆ ಹೋದ ಸಜ್ಜನರು ಮಾಡಬೇಕಾದ 'ತೀರ್ಥಶ್ರಾದ್ಧ'ವನ್ನು ವಿವರಣೆ ಸಹಿತವಾಗಿ ಸಂಗ್ರಹಿಸಿದ್ದೇನೆ.

ಈ ಕೃತಿಯನ್ನು ನಮ್ಮ ಕುಲಸ್ವಾಮಿಯಾದ ಶ್ರೀ ಶ್ರೀನಿವಾಸದೇವರ ಅಡಿದಾವರೆಗಳಲ್ಲಿ ಭಕ್ತಿಪೂರ್ವಕ ಸಮರ್ಪಿಸಿದ್ದೇನೆ.

ಕೃತಿ ಸಂಪಾದನ ಕಾರ್ಯದಲ್ಲಿ ಮಾರ್ಗದರ್ಶನ ಮಾಡಿದ ನನ್ನ ವಿದ್ಯಾಗುರುಗಳಾದ ಶ್ರೀ ಪಂ॥ ತ್ರಿವಿಕ್ರಮಾಚಾರ್ಯ ಉಮರ್ಜಿ ಅವರಿಗೆ ನನ್ನ ಕೃತಜ್ಞತಾಪೂರ್ವಕ ಶಿ॥ ಸಾ॥ ನಮಸ್ಕಾರಗಳು.

ಕೃತಿಯು ಹೊರಬರಲು ಸಹಾಯ ಮಾಡಿದ ಪಂ॥ ಪ್ರದ್ಯುಮ್ನಾಚಾರ್ ಪೂಜಾರ ಇವರಿಗೆ ನನ್ನ ನಮಸ್ಕಾರಗಳು. ಹಾಗೂ ನನ್ನ ತಮ್ಮ ಚಿ॥ ವಾದಿರಾಜ ಮಠದ, ನನ್ನ ಸುಪುತ್ರ ಚಿ॥ ಆನಂದತೀರ್ಥ ಮಠದ, ಶ್ರೀ ರಾಘವೇಂದ್ರ ಅಡಬಡ್ಡಿ ಇವರಿಗೆ ನನ್ನ ಆಶೀರ್ವಾದಗಳು.

ಈ ಕೃತಿಯ ಮುದ್ರಣಕ್ಕೆ ಶ್ರೀ ಡಿ. ವಿ. ಕೃಷ್ಣಮೂರ್ತಿಯವರು ಶ್ರೀ ರಾಘವೇಂದ್ರ ದರ್ಶನ ಕೇಂದ್ರ, ಕೆಂಗೇರಿ ಉಪನಗರ, ಬೆಂಗಳೂರು ಅವರ ವತಿಯಿಂದ ಧನಸಹಾಯ ನೀಡಿದ್ದಾರೆ. ಅವರಿಗೆ ನನ್ನ ಕೃತಜ್ಞತಾಪೂರ್ವಕ ಧನ್ಯವಾದಗಳು.

ಈ ಕೃತಿಯ ಮುದ್ರಣಕ್ಕೆ ಬೆಂಗಳೂರು ನಿವಾಸಿಗಳಾದ ಶ್ರೀಯುತ ಬನಾಜಿ ಶ್ರೀನಿವಾಸಮೂರ್ತಿ ಅವರು ತಮ್ಮ ಪುತ್ರ ದಿ॥ ಕೇಶವನ ಸ್ಮರಣಾರ್ಥ ಧನಸಹಾಯ ನೀಡಿದ್ದಾರೆ. ಶ್ರೀಹರಿವಾಯುಗಳು ದಿ॥ ಕೇಶವನಿಗೆ ಸದ್ಗತಿ ನೀಡಲಿ.

ಈ ಕೃತಿಯನ್ನು ಅಂದವಾಗಿ ಮುದ್ರಿಸಿಕೊಟ್ಟ ಮೆ॥ ಮನೋಹರ ಪ್ರಿಂಟಿಂಗ ಪ್ರೆಸ್, ಧಾರವಾಡ ಅವರಿಗೆ ಧನ್ಯವಾದಗಳು.

ವಿಜಾಪುರ
19–3–2011

ಇತಿ ಸಜ್ಜನ ಸೇವಕ
**ಶ್ರೀನಿವಾಸ ಸು. ಮಠದ**

# ವಿಷಯಾನುಕ್ರಮಣಿಕಾ

# ತೀರ್ಥಶ್ರಾದ್ಧ ಮಾಡುವ ಕ್ರಮ

(ಕನ್ಯಾಗತ ಪ್ರಯುಕ್ತ ಹೋದಾಗ ಇದೇ ಕ್ರಮವನ್ನು ಅನುಸರಿಸಬೇಕು)

ತೀರ್ಥಗಳಿಗೆ ಹೋದಾಗ ತೀರ್ಥದರ್ಶನ ಮಾಡಿದ ಕೂಡಲೇ ಸಾಷ್ಟಾಂಗ ನಮಸ್ಕಾರ ಮಾಡಿ ಆಯಾ ತೀರ್ಥಾಭಿಮಾನಿದೇವತೆಯ ಸ್ತೋತ್ರ ಮಾಡಬೇಕು. ನದೀ ದಂಡೆಗೆ ಹೋಗಿ "ಓಂ" ಹೇಳುತ್ತ ನೀರನ್ನು ಚಲಿಸುವಂತೆ ಮಾಡಿ ಮಾರ್ಜನ ಮಾಡಿಕೊಳ್ಳಬೇಕು.

ನಂತರ ನದಿಯ ಮುಂಭಾಗದಲ್ಲಿ ಟೆಂಗಿನಕಾಯಿ, ಫಲ, ಪುಷ್ಪ, ದಕ್ಷಿಣೆಗಳನ್ನು ಇಟ್ಟು ಸಾಷ್ಟಾಂಗ ನಮಸ್ಕಾರ ಮಾಡಬೇಕು.

ತೀರ್ಥದಲ್ಲಿ ಉಟ್ಟಿರುವ ಬಟ್ಟೆ ಸಹಿತ ಮುಳುಗಿ ಸ್ನಾನಮಾಡಿ ದಂಡೆಗೆ ಬಂದು ಆಚಮನಮಾಡಿ ಶಿಖೆಯನ್ನು ಕಟ್ಟಿಕೊಂಡು ನಾಮಮುದ್ರಾದಿಗಳನ್ನು ಧಾರಣಮಾಡಿ ಮತ್ತೆ ಆಚಮನಮಾಡಿ

ಪವಿತ್ರಂ ತೇ ವಿತತಂ ಬ್ರಹ್ಮಣಸ್ಪತೇ ಪ್ರಭುರ್ಗಾತ್ರಾಣಿ ಪರ್ಯೇಷಿ ವಿಶ್ವತಃ।
ಅತಪ್ತತನೂರ್ನತದಾಮೋ ಅಶ್ನುತೇ ಶೃತಾಸ ಇದ್ವಹಂತಸ್ತತ್ ಸಮಾಸತ ॥

ಮಂತ್ರ ಹೇಳುತ್ತ ಪವಿತ್ರವನ್ನು ಧರಿಸಿ ಬ್ರಹ್ಮದಂಡವನ್ನು (ಅಕ್ಕಿಕಾಳು, ಎಳ್ಳು, ದಕ್ಷಿಣೆ, ದರ್ಭೆ) ತಟ್ಟೆಯಲ್ಲಿ ಹಿಡಿದುಕೊಂಡು–

**ಸಮಸ್ತ ಸಂಪತ್ ಸಮವಾಪ್ತಿಹೇತವಃ**
**ಸಮುತ್ಥಿತಾಪತ್ಕುಲ ಧೂಮಕೇತವಃ ।**
**ಅಪಾರ ಸಂಸಾರ ಸಮುದ್ರ ಸೇತವಃ**
**ಪುನಂತು ಮಾಂ ಬ್ರಾಹ್ಮಣ ಪಾದಪಾಂಸವಃ ॥**

ಮಂತ್ರ ಹೇಳುತ್ತ ಬ್ರಾಹ್ಮಣರಿಗೆ ಮೂರು ಪ್ರದಕ್ಷಿಣೆ ಹಾಕಿ ಬ್ರಹ್ಮದಂಡವನ್ನು ಬ್ರಾಹ್ಮಣರ ಮುಂದೆ ಇಟ್ಟು ಸಾಷ್ಟಾಂಗ ನಮಸ್ಕಾರ ಮಾಡಬೇಕು.

**ಕ್ಷೌರ ಸಂಕಲ್ಪ** – ಆಚಮನ, ಪ್ರಾಣಾಯಾಮ, ದೇಶ ಕಾಲಗಳನ್ನು ಉಚ್ಚರಿಸಿ–

**ಶ್ರೀವಿಷ್ಣುಪ್ರೇರಣಯಾ ಶ್ರೀವಿಷ್ಣುಪ್ರೀತ್ಯರ್ಥಂ** –(ಆಯಾ ತೀರ್ಥ, ಕ್ಷೇತ್ರ ಅಭಿಮಾನಿದೇವತೆಯ ಹೆಸರನ್ನು ಉಚ್ಚರಿಸಿ) ಯಾತ್ರಾ ಪರಿಪೂರ್ಣತಾ ಸಿದ್ಧ್ಯರ್ಥಂ, ಮಮ ಸಮಸ್ತ ಪಿತೃಣಾಂ ಪುಣ್ಯಲೋಕಾವಾಪ್ತ್ಯರ್ಥಂ

ವಪನಮಹಂಕರಿಷ್ಯೇ ॥ಅಪಸವ್ಯದಿಂದ (ಬ್ರಾಹ್ಮಣರಿಂದ ಅನುಜ್ಞೆತೆಗೆದುಕೊಂಡು) **ಸಮಸ್ತ ಪಿತೃ ಪಿತಾಮಹ ಪ್ರಪಿತಾಮಹಾನಾಂ**

**ಶರ್ಮಣಾಂ ಗೋತ್ರಾಣಾಂ ವಸು, ರುದ್ರ, ಆದಿತ್ಯಾಂತರ್ಗತ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಪ್ರದ್ಯುಮ್ನ ಸಂಕರ್ಷಣ ವಾಸುದೇವಾನಾಂ ॥ ಕ್ಷೌರಕರ್ಮಣಿ ಮಮ ಅಧಿಕಾರೋಽಸ್ತ್ವಿತಿ ಭವಂತೋ ಬ್ರುವಂತು ॥ ಕ್ಷೌರಕರ್ಮಣಿ ತವ ಅಧಿಕಾರೋಽಸ್ತು ॥**

ಈ ಶ್ಲೋಕ ಹೇಳಬೇಕು–

**ಆತ್ಮನಃ ಶುದ್ಧಿ ಕಾಮೋ ವಾ ಪಿತೃಣಾಂ ಮುಕ್ತಿಹೇತವೇ ।**
**ವಪನಂ ಕಾರಯಿಷ್ಯಾಮಿ ಕೃಷ್ಣೇಽಹಂ ತವ ಸನ್ನಿಧೌ ॥**

**ಯಾನಿ ಕಾನಿ ಚ ಪಾಪಾನಿ ಬ್ರಹ್ಮಹತ್ಯಾದಿಕಾನಿ ಚ ।**
**ಕೇಶಾನಾಶ್ರಿತ್ಯ ತಿಷ್ಠಂತಿ ತಸ್ಮಾತ್ ಕೇಶಾನ್ ವಪಾಮ್ಯಹಮ್ ॥**

"ಸುಕ್ಷೌರಮಸ್ತು" ಎಂಬುದಾಗಿ ಬ್ರಾಹ್ಮಣರಿಂದ ಅನುಜ್ಞೆಸ್ವೀಕರಿಸಿ (ಕಂಕುಳನ್ನು ಬಿಟ್ಟು) ಕ್ಷೌರ ಮಾಡಿಸಿಕೊಳ್ಳಬೇಕು. ಕ್ಷೌರ ನಂತರದಲ್ಲಿ ಸ್ನಾನ ಮಾಡಿ 12 ಸಾರೆ ಬಾಯಿ ಮುಕ್ಕಳಿಸಿ,

**ಮುಖದುರ್ಗಂಧನಾಶಾಯ ದಂತಾನಾಂ ಚ ವಿಶುದ್ಧಯೇ ।**
**ಷ್ಠೀವನಾಯಚ ಗಾತ್ರಾಣಾಂ ಕುರ್ವೇಽಹಂ ದಂತಧಾವನಂ ॥**

ಈ ಮಂತ್ರ ಹೇಳಿ ಹಲ್ಲು ಉಜ್ಜಿಕೊಂಡು ಬಾಯಿ ಮುಕ್ಕಳಿಸಿ ಶುದ್ಧನಾಗಿ ಸ್ನಾನ ಸಂಕಲ್ಪ ಮಾಡಬೇಕು.

# ಸ್ನಾನ ಸಂಕಲ್ಪ

(ಯಾವುದೇ ನದೀ ಮೊದಲಾದ ಜಲಾಶಯದಲ್ಲಿ ಸ್ನಾನ ಮಾಡುವಾಗ ಮೊದಲಿಗೆ ನದಿಗೆ, ಅಂತರ್ಯಾಮಿಯಾದ ಭಗವಂತನಿಗೆ ಭಕ್ತಿಪೂರ್ವಕವಾಗಿ ನಮಸ್ಕರಿಸಿ "ಮಹಾಪಾಪಿಷ್ಠನಾದ ನಾನು ನಿನ್ನಲ್ಲಿ ಸ್ನಾನ ಮಾಡುತ್ತಿದ್ದೇನೆ. ನನ್ನ ಪಾಪಗಳನ್ನು ಪರಿಹರಿಸು. ನನ್ನ ಹೊಲಸು ದೇಹದಿಂದ ನಿನ್ನನ್ನು ಸ್ಪರ್ಶಿಸುತ್ತಿರುವೆ. ನನ್ನನ್ನು ಕ್ಷಮಿಸು" ಎಂದು ಪ್ರಾರ್ಥಿಸಿ ನಂತರ ಜಲಾಶಯದಲ್ಲಿ ಇಳಿಯಬೇಕು. ನಂತರ ನದೀ ಪ್ರವಾಹಕ್ಕೆ ಅಭಿಮುಖವಾಗಿ ನಿಂತು ಒಮ್ಮೆ ಸ್ನಾನ ಮಾಡಿ ನಂತರ ಪೂರ್ವಾಭಿಮುಖವಾಗಿ ಸಂಕಲ್ಪ ಮಾಡಬೇಕು.)

ಆಚಮ್ಯ, ಪ್ರಾಣಾನಾಯಮ್ಯ, ದೇಶಕಾಲೌ ಸ್ಮೃತ್ವಾ, ಏವಂ ಗುಣವಿಶೇಷಣವಿಶಿಷ್ಟಾಯಾಂ ಶುಭತಿಥೌ ಅಸ್ಮದ್ಗುರ್ವಂತರ್ಗತ- ಪರಮಗುರ್ವಾದಿಸಮಸ್ತಗುರ್ವಂತರ್ಗತ- ಸಮಸ್ತನದ್ಯಭಿಮಾನಿ ಗಂಗಾದಿ ದೇವತಾಂತರ್ಗತ ಸಮಸ್ತ ತಾತ್ವಿಕ ದೇವತಾಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ನಿರ್ದೋಷ, ಅನಂತಕಲ್ಯಾಣಗುಣಪರಿಪೂರ್ಣ, ಸಮಸ್ತಜಗದುತ್ಪತ್ತಿಸ್ಥಿತಿಲಯಕಾರಣೀಭೂತ–ಮತ್ಸ್ಯಕೂರ್ಮಾದಿ ಅನಂತಾವತಾರಾತ್ಮಕ – ಸೀತಾಸಮೇತಶ್ರೀಮೂಲರಾಮ ದಿಗ್ವಿಜಯರಾಮ ವೇದವ್ಯಾಸಾತ್ಮಕ- ಭೈಷ್ಮೀಸತ್ಯಾಸಮೇತಶ್ರೀಕೃಷ್ಣಾತ್ಮಕ- ಅನಿರುದ್ಧಾದಿ ಚತುರ್ಮೂರ್ತ್ಯಾತ್ಮಕ- ಏತನ್ಮಾಸನಿಯಾಮಕಾಭಿನ್ನ- ಬಿಂಬಮೂರ್ತಿ ಪ್ರೇರಣಯಾ ಬಿಂಬಮೂರ್ತಿಪ್ರೀತ್ಯರ್ಥಂ, ತಥಾ ಅನಂತಾನಂದ ನಿದಾನಭೂತಸ್ಯ, ಶ್ವೇತದ್ವೀಪೇಶಮಾಯಾಪತಿವಾಸುದೇವಸ್ಯ ಪರಮಪ್ರಸಾದ ಕಾರಣೀಭೂತಾಂ ಅತ್ಯರ್ಥಾಂ ಭಕ್ತಿಂ ನಿಷ್ಪಾದಯಂತಿ ಭಗವದಪರೋಕ್ಷದರ್ಶನ- ನಿದಿಧ್ಯಾಸನ- ಮನನ ಶ್ರವಣಾದೀನಿ ಸಂಪಾದಯಿತುಂ, ಹರಿಸರ್ವೋತ್ತಮತ್ವಾದಿಜ್ಞಾನ- ನಿರ್ನಿಮಿತ್ತನಿಶ್ಚಂಚಲಭಕ್ತಿ- ವಿಷಯವೈರಾಗ್ಯ ಸಂಪ್ರಾಪ್ತಯೇ, ಅಮಾನಿತ್ವ – ಅದಂಭಿತ್ವಾದಿಜ್ಞಾನಸಾಧನಾನಾಂ, ಅಭಯಸತ್ವಸಂಶುದ್ಧ್ಯಾದಿದೈವಸಂಪದಾಂ ಚ ಅವಾಪ್ತಯೇ, ಕ್ಷುದ್ರಪಾತಕ- ಉಪಪಾತಕ- ಮಹಾಪಾತಕಾನಾಂ ನಿರಾಸಾರ್ಥಂ, ಕಾಯಿಕ – ವಾಚಿಕ – ಮಾನಸಿಕ – ಜ್ಞಾತಾಜ್ಞಾತದೋಷನಿಬರ್ಹಣದ್ವಾರಾ, ಶರೀರೇಂದ್ರಿಯಾಂತಃಕರಣಾನಾಂ ಸಂಶೋಧನಾರ್ಥಂ, ಸದ್ಗುರೂಪಸತ್ತಿಸಿದ್ಧ್ಯರ್ಥಂ-

ಬ್ರಹ್ಮಾಂಡಬಾಹ್ಯಸ್ಯ ಚಿಜ್ಜಲಸ್ಯ ತದಧಿಷ್ಠಾತುಃ ಮೂಲನಾರಾಯಣಸ್ಯ, ಅಂಡಾಂತರ್ವರ್ತಿ ಗರ್ಭೋದಕಸ್ಯ ತದಧಿಷ್ಠಾತುಃ ವಿರಾಡಭಿನ್ನಪದ್ಮನಾಭಸ್ಯ, ಕ್ಷೀರಸಾಗರಶಾಯಿ, ತನ್ಮಧ್ಯವಿರಾಜಮಾನ ಶ್ವೇತದ್ವೀಪಪತಿ ವಾಸುದೇವಸ್ಯ, ಸಮಸ್ತನದ್ಯಾತ್ರಯ– ನದ್ಯುತ್ಪತ್ತಿಕಾರಣೀಭೂತಚಿನ್ಮಯನಾಡ್ಯ ಭಿನ್ನಪರಮಪುರುಷಸ್ಯ, ಚಿದ್ರೂಪಸ್ಯ ಗಂಗಾನಾಮ್ನಃ ಭಗವತಃ 'ತತ್ರ ಭಗವತಃ ಸಾಕ್ಷಾತ್ ಯಜ್ಞಲಿಂಗಸ್ಯ ವಿಷ್ಣೋಃ ವಿಕ್ರಮತಃ ವಾಮಪಾದಾಂಗುಷ್ಠ–ನಖ–ನಿರ್ಭಿನ್ನ–ಊರ್ಧ್ವಾಂಡ–ಕಟಾಹ– ವಿವರೇಣ–ಅಂತಃಪ್ರವಿಷ್ಟಾಯಾ ಬಾಹ್ಯಜಲಧಾರಾ ತಚ್ಚರಣ – ಪಂಕಜಾವನೇಜನ–ಅರುಣಕಿಂಜಲ್ಕೋಪರಂಜಿತ–ಅಖಿಲಜಗದಘ–ಮಲಾಪಹೋಪಸ್ಪರ್ಶನಾ ಅಮಲಾ ಸಾಕ್ಷಾತ್ ಭಗವತ್ಪದೀ ಇತ್ಯನುಪಲಕ್ಷಿತವಚೋಭಿಃ ಅಭಿಧೀಯಮಾನಾಯಾಃ, ವಿಷ್ಣುಪಾದಾಬ್ಜಸಂಭೂತಾಯಾಃ ಗಂಗಾಯಾಃ ತದಂತರ್ಗತ ಮಾಧವಸ್ಯ, ಗೋದಾವರ್ಯಾಃ ತದಂತರ್ಗತ ವೀರನಾರಾಯಣಸ್ಯ, ಕೃಷ್ಣವೇಣ್ಯಾಃ ಜನಾರ್ದನಸ್ಯ, ಸರಸ್ವತ್ಯಾಃ ಪದ್ಮನಾಭಸ್ಯ, ಕಾವೇರ್ಯಾಃ ರಂಗನಾಥಸ್ಯ, ಸರಯ್ವಾಃ ರಾಮಸ್ಯ, ತುಂಗಭದ್ರಾಯಾಃ ವರಾಹಸ್ಯ, ಯಮುನಾಯಾಃ ಕೃಷ್ಣಸ್ಯ, ನರ್ಮದಾಯಾಃ ವಿಷ್ಣೋಃ, ಸಿಂಧ್ವಾಃ ಕ್ಷೀರಾಬ್ಧಿಶಾಯಿನಃ, ಭವನಾಶಿನ್ಯಾಃ ನೃಸಿಂಹಸ್ಯ, ಕುಮುದ್ವತ್ಯಾಃ ತ್ರಿವಿಕ್ರಮಸ್ಯ, ಮಂಜುಲಾಯಾಃ ಹಯಗ್ರೀವಸ್ಯ, ಭೀಮರಥ್ಯಾಃ ಶ್ರೀಧರಸ್ಯ, ತಾಮ್ರಪರ್ಣ್ಯಾಃ ಅನಂತಸ್ಯ, ಮಲಾಪಹಾರ್ಯಾಃ ಜನಾರ್ದನಸ್ಯ, ಪಿನಾಕಿನ್ಯಾಃ ಕೇಶವಸ್ಯ– ಏವಂ ಅಲಕನಂದಾ–ನೇತ್ರಾವತೀ–ಕುಮಾರಧಾರಾ–ಪಯಸ್ವಿನೀ– ಸುವರ್ಣಾ– ವರದಾ– ಧರ್ಮಗಂಗಾ–ಶಾಲ್ಮಲೀ–ತಾಪಾ–ಬಾಣಗಂಗಾ–ಗೋಮತೀ–ತ್ರಿವೇಣೀ–ಫಲ್ಗು–ಗಂಗಾಯಮುನಾಸರಸ್ವತೀಸಂಗಮ–ಗಂಗಾಸಾಗರಸಂಗಮ–ನಿವೃತ್ತಿಸಂಗಮ–ಸ್ವರ್ಣಮುಖೀ–ನೃಪತುಂಗಾ–ಧನುಷ್ಕೋಟಿ–ಘೃತಧಾರಾ–ತುಂಗಾ–ಭದ್ರಾ–ಘಟಪ್ರಭಾ–ಮಲಪ್ರಭಾ–ಸಿಂಧು–ಬ್ರಹ್ಮಪುತ್ರ–ಗಂಡಕೀ–ವಿನತಾ–ಕಪಿಲಾ–ಸೀತಾ–ಅಘನಾಶಿನೀ–ಶರಾವತೀ–ಕಾಗಿಣೀ ಇತ್ಯಾದಿ ನದೀನಾಂ ತದಂತರ್ಗತ ದತ್ತಾತ್ರೇಯಾದಿರೂಪಾಣಾಂ–

ಮಧ್ವಸರೋವರಸ್ಯ ತದಂತರ್ಗತ ಶ್ರೀಕೃಷ್ಣಸ್ಯ, ಸ್ವಾಮಿಪುಷ್ಕರಿಣ್ಯಾಃ ತದಂತರ್ಗತ ಶ್ರೀಭೂಸಹಿತ ಅಧೋಕ್ಷಜಸ್ಯ ಶ್ರೀ ಶ್ರೀನಿವಾಸಸ್ಯ, ಚಂದ್ರಪುಷ್ಕರಿಣ್ಯಾಃ ತದಂತರ್ಗತ ವಾಮನಸ್ಯ, ಮಾನಸರೋವರಸ್ಯ ತದಂತರ್ಗತ ಮಧುಸೂದನಸ್ಯ,

ಬಿಂದುಸರೋವರಸ್ಯ ತದಂತರ್ಗತ ಕಪಿಲಸ್ಯ, ಪರಶುತೀರ್ಥ–ಬಾಣತೀರ್ಥ–ಗದಾತೀರ್ಥ–ಧನುಸ್ತೀರ್ಥ–ವಾಸುದೇವತೀರ್ಥ–ದಂಡತೀರ್ಥ–ಹಂಪೀಸ್ಥಚಕ್ರತೀರ್ಥ–ನೈಮಿಷಾರಣ್ಯಸ್ಥಚಕ್ರತೀರ್ಥ–ವಿಶ್ರಾಂತಿತೀರ್ಥ–ಪುಷ್ಕರತೀರ್ಥ–ತುಂಬುರುತೀರ್ಥ–ವಾಮನತೀರ್ಥ–ಕಪಿಲತೀರ್ಥ–ಪದ್ಮತೀರ್ಥ–ಚಂದ್ರತೀರ್ಥ–ಧವಲಗಂಗಾ–ಪಾಪನಾಶಿನೀತೀರ್ಥ–ನರಸಿಂಹತೀರ್ಥ–ಇತ್ಯಾದಿ ಸಮಸ್ತಸರೋವರಾಣಾಂ ತದಂತರ್ಗತ ಕೇಶವಾದೀನಾಂ–

ದೇವಖಾತಾನಾಂ ತದಂತರ್ಗತ ಗದಾಧರಸ್ಯ, ಕ್ಷುದ್ರಾಪಗಾನಾಂ ತದಂತರ್ಗತ ಲಕ್ಷ್ಮೀನಾರಾಯಣಸ್ಯ, ತಟಾಕಾನಾಂ ತದಂತರ್ಗತ ಶೇಷಶಾಯೀ ಅಚ್ಯುತಸ್ಯ, ವಾಪೀನಾಂ ತದಂತರ್ಗತ ಚಕ್ರಪಾಣಿಮಹಾವಿಭೋಃ, ಕ್ಷೀರಸಾಗರಾದಿಸಪ್ತಸಾಗರಾಣಾಂ, ತಥಾ ಸಾರ್ಧತ್ರಿಕೋಟಿತೀರ್ಥಾನಾಂ ತದಭಿಮಾನಿದೇವತಾನಾಂ, ಬುಧವರುಣಾಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಮತ್ಸ್ಯತ್ರಿವಿಕ್ರಮನಾರಾಯಣಾದಿ ರೂಪಾಣಾಂ ಸ್ಮರಣಪೂರ್ವಕಂ ತಾನಿ ತೀರ್ಥಾನಿ ತದಭಿಮಾನಿದೇವತಾಶ್ಚ ತನ್ನಿಯಾಮಕಭಗವದ್ರೂಪಾಣಿ ಚ ಅಸ್ಮಿನ್ ಜಲಾಶಯೇ (ಜಲೇ) ಆವಾಹಯಿಷ್ಯೇ. ತತಃ ತತ್ಸನ್ನಿಧಾನೋಪೇತೇ ಅಸ್ಮಿನ್ ಜಲಾಶಯೇ ಸ್ನಾನಂ ಚ ಕರಿಷ್ಯೇ. ಎಂದು ಸಂಕಲ್ಪಮಾಡಿ – (ಪಕ್ಕದಲ್ಲಿ ಬ್ರಾಹ್ಮಣರಿದ್ದರೆ ಅವರಿಂದ ಸ್ನಾನಕ್ಕಾಗಿ ಅನುಜ್ಞೆಯನ್ನು ಪಡೆಯಬೇಕು) ಚತುರ್ಭುಜನಾದ ವಾಸುದೇವ ನಮ್ಮ ತಲೆಯ ಮೇಲೆ ನಿಂತಿರುವನೆಂದು ಭಕ್ತಿಯಿಂದ ಸ್ಮರಿಸಬೇಕು. ಆತನ ಪಾವನ ಪಾದಗಳಿಂದ ಹರಿದ ಪಾದಜಲವು, ಮೂರ್ಧನ್ಯ ನಾಡಿಯಿಂದ ಒಳಹೊಕ್ಕು ಇಡಾ–ಪಿಂಗಳಾ–ಸುಷುಮ್ನಾ ನಾಡಿಗಳಲ್ಲಿ ತುಂಬಿದೆ ಎಂದು ಭಾವಿಸಬೇಕು. ಈ ಪಾದತೀರ್ಥವೇ ಒಳಗಿನ ಮನ – ಇಂದ್ರಿಯಗಳ ಮಾಲಿನ್ಯವನ್ನು, ಹೊರಗಿನ ಮೈಲಿಗೆಯನ್ನು ತೊಳೆಯುವದು. ಮೂರುವರೆ ಕೋಟಿ ತೀರ್ಥಕ್ಕಿಂತಲೂ ಮಿಗಿಲಾಗಿ ಪವಿತ್ರವಾದುದು ಈ ಪಾದತೀರ್ಥ ಎಂದು ಚಿಂತಿಸುತ್ತಾ ಸ್ನಾನವನ್ನು ಮಾಡಬೇಕು.

(ಶ್ರೀಮದುತ್ತರಾದಿಮಠದ ಕ್ಯಾಲೆಂಡರನಿಂದ ಆಯ್ದುಕೊಂಡ ಭಾಗ)

# ಸಂಕ್ಷಿಪ್ತ ಸ್ನಾನಸಂಕಲ್ಪ

(ಸಮಯಾಭಾವವಿದ್ದಾಗ ಈ ಸ್ನಾನಸಂಕಲ್ಪಮಾಡಬಹುದು)

ಆಚಮ್ಯ, ಪ್ರಾಣಾನಾಯಮ್ಯ, ದೇಶಕಾಲೌ ಸ್ಮೃತ್ವಾ, ಏವಂ ಗುಣವಿಶೇಷಣವಿಶಿಷ್ಟಾಯಾಂ ಶುಭತಿಥೌ ಅಸ್ಮದ್ಗುರ್ವಂತರ್ಗತ-ಸಮಸ್ತನದ್ಯಭಿಮಾನಿ ಗಂಗಾದಿದೇವತಾಂರ್ಗತ-ಸಮಸ್ತತಾತ್ವಿಕ ದೇವತಾಂತರ್ಗತ- ಭಾರತೀರಮಣ ಮುಖ್ಯಪ್ರಾಣಾಂತರ್ಗತ ನಿರ್ದೋಷ ಅನಂತಕಲ್ಯಾಣಗುಣಪರಿಪೂರ್ಣ, ಮತ್ಸ್ಯಕೂರ್ಮಾದಿ ಅನಂತಾವತಾರಾತ್ಮಕ-ರಾಮಕೃಷ್ಣವೇದವ್ಯಾಸಾತ್ಮಕ-ಏತನ್ಸ್ನಾನನಿಯಾಮಕಾಭಿನ್ನ-ಬಿಂಬಮೂರ್ತಿ ಪ್ರೇರಣಯಾ ಬಿಂಬಮೂರ್ತಿಪ್ರೀತ್ಯರ್ಥಂ, ಜ್ಞಾನ-ಭಕ್ತಿ-ವೈರಾಗ್ಯ ಸಂಪ್ರಾಪ್ತಯೇ, ಕಾಯಿಕ-ವಾಚಿಕ-ಮಾನಸಿಕ-ಜ್ಞಾತಾಜ್ಞಾತ ದೋಷನಿಬರ್ಹಣದ್ವಾರಾ, ಶರೀರೇಂದ್ರಿಯಾಂತಃಕರಣಾನಾಂ ಸಂಶೋಧನಾರ್ಥಂ, ಕ್ಷೀರಸಾಗರಾದಿ ಸಪ್ತಸಾಗರಾಣಾಂ, ಗಂಗಾದಿಸಮಸ್ತನದೀನಾಂ, ಸಾರ್ಧತ್ರಿಕೋಟಿತೀರ್ಥಾನಾಂ ತದಭಿಮಾನಿ ದೇವತಾನಾಂ, ಬುಧವರುಣಾಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಮತ್ಸ್ಯತ್ರಿವಿಕ್ರಮ ನಾರಾಯಣಾದಿರೂಪಾಣಾಂ ಸ್ಮರಣಪೂರ್ವಕಂ ತಾನಿ ತೀರ್ಥಾನಿ ತದಭಿಮಾನಿದೇವತಾಶ್ಚ ತನ್ನಿಯಾಮಕ ಭಗವದ್ರೂಪಾಣಿ ಚ ಅಸ್ಮಿನ್ ಜಲಾಶಯೇ (ಜಲೇ) ಆವಾಹಯಿಷ್ಯೇ. ತತಃ ತತ್ಸನ್ನಿಧಾನೋಪೇತೇ ಅಸ್ಮಿನ್ ಜಲಾಶಯೇ ಸ್ನಾನಂ ಚ ಕರಿಷ್ಯೇ.

## ಆಯಾ ತೀರ್ಥಕ್ಷೇತ್ರಗಳಲ್ಲಿ ಮಾಡುವ ಸ್ನಾನ ಸಂಕಲ್ಪಗಳು*

1. ಕಾಶೀಕ್ಷೇತ್ರ-ಆಚಮ್ಯ ಪ್ರಾಣಾನಾಯಮ್ಯ, ಶ್ರೀ ಗೋವಿಂದ ಗೋವಿಂದ, ಶ್ರೀಮದ್ಭಗವತೋ ಮಹಾಪುರುಷಸ್ಯ ವಿಷ್ಣೋಃ ಅಚಿಂತ್ಯಶಕ್ತ್ಯಾ ದೃಹ್ಯಮಾಣೇ ಅಸ್ಮಿನ್ ಬ್ರಹ್ಮಾಂಡೇ ಭೂಲೋಕೇ, ಭರತವರ್ಷೇ, ಭರತಖಂಡೇ, ಜಂಬೂದ್ವೀಪೇ, ಮೇರೋಃ ದಕ್ಷಿಣ ದಿಗ್ಭಾಗೇ, ವಿಂಧ್ಯಸ್ಯ ಉತ್ತರೇ, ಆರ್ಯಾವರ್ತೈಕದೇಶೇ, ಅವಿಮುಕ್ತ ವಾರಾಣಸೀ ಕ್ಷೇತ್ರೇ, ಆನಂದವನೇ ಮಹಾಸ್ಮಶಾನೇ, ಗೌರೀಮುಖೇ, ತ್ರಿಕಂಟಕ

* ಈ ಭಾಗವನ್ನು ಪಂ ॥ ಪ್ರಾಣನಾಥಾಚಾರ್ಯ ಪಾಂಗರೀ ಅವರ ಋಗ್ವೇದೀಯ ಶ್ರಾದ್ಧವಿಧಾನ ಪುಸ್ತಕದಿಂದ ಕೃತಜ್ಞತಾಪೂರ್ವಕ ಆಯ್ದುಕೊಳ್ಳಲಾಗಿದೆ.

ವಿರಾಜಿತೇ, ಅಸೀರ್ವರುಣಯೋರ್ಮಧ್ಯೇ, ಉತ್ತರವಾಹಿನ್ಯಾಂ, ಭಾಗೀರಥ್ಯಾಃ ಪಶ್ಚಿಮತೀರೇ, **ವಿಕ್ರಮಶಕೇ,** ವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ ಬ್ರಹ್ಮಣೋ ದ್ವಿತೀಯ ಪರಾರ್ಧೇ, ಶ್ರೀ ಶ್ವೇತವರಾಹಕಲ್ಪೇ, ವೈವಸ್ವತ ಮನ್ವಂತರೇ, ಅಷ್ಟಾವಿಂಶತಿತಮೇ, ಕಲಿಯುಗೇ, ಅಸ್ಮಿನ್ ವರ್ತಮಾನೇ, ವ್ಯಾವಹಾರಿಕೇ ಚಾಂದ್ರಮಾನೇನ, .......... ನಾಮ ಸಂವತ್ಸರೇ......... ಅಯನೇ........ ಋತೌ......... ಮಾಸೇ...... ಪಕ್ಷೇ...... ತಿಥೌ........ ವಾಸರೇ...... ಯೋಗೇ...... ಕರಣೇ, ಏವಂಗುಣ ವಿಶೇಷಣ ವಿಶಿಷ್ಟ ದೇಶ ಕಾಲಯೋಃ ಶ್ರೀಹೇವಿಷ್ಣುಪ್ರೇರಣಯಾ ಶ್ರೀವಿಷ್ಣು ಪ್ರೀತ್ಯರ್ಥಂ........ ತೀರ್ಥಸ್ನಾನಮಹಂ ಶ್ರೀಮುಖ್ಯಪ್ರಾಣೇನ ಪ್ರೇರಿತೋಽಹಂ ಕರಿಷ್ಯೇ ॥

2. **ಗಯಾಕ್ಷೇತ್ರ**– ಆಚಮ್ಯ ಪ್ರಾಣಾನಾಯಮ್ಯ, ಶ್ರೀಗೋವಿಂದ ಗೋವಿಂದ, ಶ್ರೀಮದ್ಭಗವತೋ ಮಹಾಪುರುಷಸ್ಯ ವಿಷ್ಣೋಃ ಅಚಿಂತ್ಯಶಕ್ತ್ಯಾದೃಹ್ಯಮಾಣೇ ಅಸ್ಮಿನ್ ಭರತಖಂಡೇ, ಜಂಬೂದ್ವೀಪೇ ಮೇರೋಃ ದಕ್ಷಿಣದಿಗ್ಭಾಗೇ, ವಿಂಧ್ಯಸ್ಯ ಉತ್ತರೇ, ಆರ್ಯಾವರ್ತಾಂತರ್ಗತ ಮಗಧದೇಶೇ, ಚಂಪಕಾರಣ್ಯೇ, ಮಧುವನೇ, ಕೋಲಾಹಲಪರ್ವತೇ, ಗಯಾಗದಾಧರ ಕ್ಷೇತ್ರೇ, **ವಿಕ್ರಮಶಕೇ**........................ ಕರಿಷ್ಯೇ ॥

3. **ಪ್ರಯಾಗಕ್ಷೇತ್ರ**– ಆಚಮ್ಯ ಪ್ರಾಣಾನಾಯಮ್ಯ, ಶ್ರೀಗೋವಿಂದ ಗೋವಿಂದ, ಶ್ರೀಮದ್ಭಗವತೋ ಮಹಾಪುರುಷಸ್ಯ ವಿಷ್ಣೋಃ ಅಚಿಂತ್ಯಶಕ್ತ್ಯಾದೃಹ್ಯಮಾಣೇ ಅಸ್ಮಿನ್ ಭರತಖಂಡೇ, ಜಂಬೂದ್ವೀಪೇ ಮೇರೋಃ ದಕ್ಷಿಣದಿಗ್ಭಾಗೇ, ವಿಂಧ್ಯಸ್ಯೋತ್ತರೇ, ಆರ್ಯಾವರ್ತಾಂತರ್ಗತ ಬ್ರಹ್ಮಾವರ್ತೈಕದೇಶೇ, ವಿಷ್ಣು ಪ್ರಜಾಪತಿಕ್ಷೇತ್ರೇ, ಅಂತರ್ವೇದ್ಯಾಂ ಷಟ್‌ಕೂಲಮಧ್ಯೇ, ಭಾಗೀರಥ್ಯಾಃ ಪಶ್ಚಿಮೇತೀರೇ, ಕಾಲಿಂದ್ಯಾಃ ಉತ್ತರತೀರೇ, ವಟಸ್ಯ ಪೂರ್ವದಿಗ್ಭಾಗೇ,**ವಿಕ್ರಮಶಕೇ**........ ಕರಿಷ್ಯೇ ॥

4. **ಅಯೋಧ್ಯಾಕ್ಷೇತ್ರ**– ಆಚಮ್ಯ ಪ್ರಾಣಾನಾಯಮ್ಯ, ಶ್ರೀಗೋವಿಂದ ಗೋವಿಂದ, ಶ್ರೀಮದ್ಭಗವತೋ ಮಹಾಪುರುಷಸ್ಯ ವಿಷ್ಣೋಃ ಅಚಿಂತ್ಯಶಕ್ತ್ಯಾದೃಹ್ಯಮಾಣೇ ಅಸ್ಮಿನ್ ಭರತಖಂಡೇ, ಜಂಬೂದ್ವೀಪೇ ಆರ್ಯಾವರ್ತಾಂತರ್ಗತ ಕೌಸಲದೇಶೇ, ಪ್ರಮೋದವನೇ, ವರಾಹಖುರೇ, ಸಾರಸ್ವತಕ್ಷೇತ್ರೇ, ನಂದಿಗ್ರಾಮೇ, ಅಯೋಧ್ಯಾಯಾಂ, ಬ್ರಹ್ಮಮಾನಸತೀರ್ಥೇ ಸ್ವರ್ಗದ್ವಾರೇ **ವಿಕ್ರಮಶಕೇ**..........ಕರಿಷ್ಯೇ ॥

5. **ಹರಿದ್ವಾರ**–ಆಚಮ್ಯ ಪ್ರಾಣಾನಾಯಮ್ಯ, ಶ್ರೀಗೋವಿಂದ ಗೋವಿಂದ, ಶ್ರೀಮದ್ಭಗವತೋ ಮಹಾಪುರುಷಸ್ಯ ವಿಷ್ಣೋಃ ಅಚಿಂತ್ಯಶಕ್ತ್ಯಾದೃಹ್ಯಮಾಣೇ ಅಸ್ಮಿನ್ ಭರತಖಂಡೇ, ಜಂಬೂದ್ವೀಪೇ ಆರ್ಯಾವರ್ತಾಂತರ್ಗತ ಹಿಮವತ್ ಪರ್ವತೈಕದೇಶೇ, ವಿಂಧ್ಯಸ್ಯ ಉತ್ತರೇ, ಗಂಗಾಯಾಃ ವಾಮಭಾಗೇ ಹರಿದ್ವಾರೇ, ಮಾಯಾಪುರೀಮಂಡಲೇ ಕೇದಾರಖಂಡೇ, ಸುದರ್ಶನಕ್ಷೇತ್ರೇ, ವಿಕ್ರಮಶಕೇ........................ ಕರಿಷ್ಯೇ ॥

6. **ದೇವಪ್ರಯಾಗ, ಕರ್ಣಪ್ರಯಾಗ, ರುದ್ರಪ್ರಯಾಗಾದಿ ಪಂಚಪ್ರಯಾಗೇ**– ಆಚಮ್ಯ ಪ್ರಾಣಾನಾಯಮ್ಯ, ಶ್ರೀಗೋವಿಂದ ಗೋವಿಂದ, ಶ್ರೀಮದ್ಭಗವತೋ ಮಹಾಪುರುಷಸ್ಯ ವಿಷ್ಣೋಃ ಅಚಿಂತ್ಯಶಕ್ತ್ಯಾದೃಹ್ಯಮಾಣೇ ಅಸ್ಮಿನ್ ಭರತಖಂಡೇ, ಜಂಬೂದ್ವೀಪೇ, ಆರ್ಯಾವರ್ತಾಂತರ್ಗತ ಹಿಮವತ್ ಪರ್ವತೈಕ ದೇಶೇ, ಕೇದಾರಖಂಡೇ, ಬೌದ್ಧಾವತಾರೇ, ಗಂಧಮಾದನ ಪರ್ವತೇ, ದಶರಥಾಚಲೇ, ಶ್ರೀಸುದರ್ಶನಕ್ಷೇತ್ರೇ, ಬ್ರಹ್ಮ, ವಸಿಷ್ಠ, ಸೂರ್ಯಕುಂಡೇ, ಅಲಕನಂದಾ, ಭಾಗೀರಥೀ, ಸರಸ್ವತೀ (ಗುಪ್ತ) ತ್ರಿವೇಣೀಸಂಗಮೇ, ದೇವ, ಕರ್ಣ, ರುದ್ರ.... ಪ್ರಯಾಗೇ........ವಿಕ್ರಮಶಕೇ........................ ಕರಿಷ್ಯೇ ॥

7. **ಬದರಿಕ್ಷೇತ್ರ**–ಆಚಮ್ಯ ಪ್ರಾಣಾನಾಯಮ್ಯ, ಶ್ರೀಗೋವಿಂದ ಗೋವಿಂದ, ಶ್ರೀಮದ್ಭಗವತೋ ಮಹಾಪುರುಷಸ್ಯ ವಿಷ್ಣೋಃ ಅಚಿಂತ್ಯಶಕ್ತ್ಯಾದೃಹ್ಯಮಾಣೇ ಅಸ್ಮಿನ್ ಭರತವರ್ಷೇ, ಭರತಖಂಡೇ, ಜಂಬೂದ್ವೀಪೇ, ಆರ್ಯಾವರ್ತಾಂತರ್ಗತ ಹಿಮವತ್ ಪರ್ವತೈಕದೇಶೇ, ಬದರಿಕಾಶ್ರಮೇ, ನರನಾರಾಯಣ ಪರ್ವತಯೋರ್ಮಧ್ಯೇ, ಪಂಚಶಿಲಾಂತರ್ಗತ, ತಪ್ತಕುಂಡಾಖ್ಯ ವಹ್ನಿಕ್ಷೇತ್ರೇ, ಉರ್ವಶೀ ಪೀಠೇ, ಭೈರವೀ ಚಕ್ರೇ, ನಾರದಕ್ಷೇತ್ರೇ,ವಿಕ್ರಮಶಕೇ........................ ಕರಿಷ್ಯೇ ॥

8. **ದ್ವಾರಕಾಕ್ಷೇತ್ರ**–ಆಚಮ್ಯ ಪ್ರಾಣಾನಾಯಮ್ಯ, ಶ್ರೀಗೋವಿಂದ ಗೋವಿಂದ, ಶ್ರೀಮದ್ಭಗವತೋ ಮಹಾಪುರುಷಸ್ಯ ವಿಷ್ಣೋಃ ಅಚಿಂತ್ಯಶಕ್ತ್ಯಾದೃಹ್ಯಮಾಣೇ ಅಸ್ಮಿನ್ ಭರತವರ್ಷೇ, ಭರತಖಂಡೇ, ಜಂಬೂದ್ವೀಪೇ, ಸೌರಾಷ್ಟ್ರ ದೇಶಾಂತರ್ಗತ ಆನರ್ತದೇಶೇ,

ಓಖಾಮಂಡಲೇ, ಚಂಪಕವನೇ, ಕುಶಸ್ಥಲ್ಯಾಃ, ದ್ವಾರಕಾ ತ್ರಿವಿಕ್ರಮಕ್ಷೇತ್ರೇ, ಗೋಮತ್ಯಾಃ ಉತ್ತರೇ ತೀರೇ ವಿಕ್ರಮಶಕೇ ............... ಕರಿಷ್ಯೇ ॥

9. **ಮಾತೃಗಯಾ ಕ್ಷೇತ್ರ–** ಆಚಮ್ಯ ಪ್ರಾಣಾನಾಯಮ್ಯ, ಶ್ರೀಗೋವಿಂದ ಗೋವಿಂದ, ಶ್ರೀಮದ್ಭಗವತೋ ಮಹಾಪುರುಷಸ್ಯ ವಿಷ್ಣೋಃ ಅಚಿಂತ್ಯಶಕ್ತ್ಯಾದೃಹ್ಯಮಾಣೇ ಅಸ್ಮಿನ್ ಭರತವರ್ಷೇ, ಭರತಖಂಡೇ, ಜಂಬೂದ್ವೀಪೇ, ಬಿಂದುಸರೋವರೇ, ಆರ್ಯಾವರ್ತಾಂತರ್ಗತ ಅರ್ಬುದಾರಣ್ಯೇ, ಕಪಿಲ ಕರ್ದಮಾಶ್ರಮೇ, ರೇವಾಯಾಃ ಉತ್ತರ ತೀರೇ, ಸರಸ್ವತ್ಯಾಃ ಪಶ್ಚಿಮತೀರೇ ವಿಕ್ರಮಶಕೇ............... ಕರಿಷ್ಯೇ ॥

ಯೋऽಸೌ ಸರ್ವಗತೋ ದೇವಃ ಚಿತ್ಸ್ವರೂಪೀ ನಿರಂಜನಃ ।
ಸ ಏವ ದ್ರವರೂಪೇಣ ಗಂಗಾಂಭೋ ನಾತ್ರ ಸಂಶಯಃ ॥

ಗಂಗಾ ಗಂಗೇತಿ ಯೋ ಬ್ರೂಯಾತ್ ಯೋಜನಾನಾಂ ಶತೈರಪಿ ।
ಮುಚ್ಯತೇ ಸರ್ವಪಾಪೇಭ್ಯಃ ವಿಷ್ಣುಲೋಕಂ ಸ ಗಚ್ಛತಿ ॥

ಗಂಗಾ ಸಿಂಧು ಸರಸ್ವತೀ ಚ ಯಮುನಾ ಗೋದಾವರೀ ನರ್ಮದಾ
ಕೃಷ್ಣಾ ಭೀಮರಥೀ ಚ ಫಲ್ಗು ಸರಯೂ ಶ್ರೀಗಂಡಕೀ ಗೋಮತೀ ।
ಕಾವೇರೀ ಕಪಿಲಾ ಪ್ರಯಾಗ ವಿನತಾ ನೇತ್ರಾವತೀತ್ಯಾದಯೋ
ನದ್ಯಃ ಶ್ರೀಹರಿಪಾದಪಂಕಜಭವಾಃ ಕುರ್ವಂತು ನೋ ಮಂಗಲಮ್ ॥

'ಪ್ರಯಾಗಃ ಪ್ರಯಾಗಃ ಪ್ರಯಾಗಃ' ಈ ಮಂತ್ರವನ್ನು ಹೇಳುತ್ತಾ ಸ್ನಾನ ಮಾಡಬೇಕು. ಎಲ್ಲ ನದಿ–ತೀರ್ಥ–ಸರೋವರ–ಸಾಗರ ಮೊದಲಾದ ಸಮಸ್ತಜಲರಾಶಿಗಳು ಭಗವಂತನ ನಾಡಿಗಳಿಂದ ಜನಿಸಿವೆ. ಅವನ ನಾಡಿಗಳನ್ನೇ ಆಶ್ರಯಿಸಿ ಇವೆ ಎಂದು ಚಿಂತಿಸುತ್ತಾ ನಮ್ಮ ಹೃದಯದಲ್ಲಿರುವ ಬಿಂಬಮೂರ್ತಿ ನಾರಾಯಣನಿಗೆ ಅಭಿಷೇಕ ಎಂದು ಅನುಸಂಧಾನ ಪೂರ್ವಕವಾಗಿ ಸ್ನಾನವನ್ನು ಮಾಡಬೇಕು.

ನಂದಿನೀ ನಲಿನೀ ಸೀತಾ ಮಾಲತೀ ಚ ಮಲಾಪಹಾ ।
ವಿಷ್ಣುಪಾದಾಬ್ಜ ಸಂಭೂತಾ ಗಂಗಾ ತ್ರಿಪಥಗಾಮಿನೀ ॥

ಭಾಗೀರಥೀ ಭೋಗವತಿ ಜಾಹ್ನವೀ ತ್ರಿದಶೇಶ್ವರೀ ।
ದ್ವಾದಶೈತಾನಿ ನಾಮಾನಿ ಯತ್ರ ಯತ್ರ ಜಲಾಶಯೇ ।
ಸ್ನಾನಕಾಲೇ ಪಠೇನ್ನಿತ್ಯಂ ತತ್ರ ತತ್ರ ವಸಾಮ್ಯಹಂ ॥

ಸ್ನಾನಮಾಡಿ 4 ಅರ್ಘ್ಯಗಳನ್ನು ಈ ಮಂತ್ರ ಹೇಳುತ್ತ ಕೊಡಬೇಕು

ನಮಃ ಕಮಲನಾಭಾಯ ನಮಸ್ತೇ ಜಲಶಾಯಿನೇ ।
ನಮಸ್ತೇऽಸ್ತು ಹೃಷಿಕೇಶ ಗೃಹಾಣಾರ್ಘ್ಯಂ ನಮೋऽಸ್ತುತೇ ॥

ಶ್ರೀವಿಷ್ಣುವಿಗೆ ಅರ್ಘ್ಯಕೊಟ್ಟನಂತರ, ಸೂರ್ಯನಿಗೆ ಕೆಳಗಿನ ಮಂತ್ರದಿಂದ ಅರ್ಘ್ಯಕೊಡಬೇಕು.

ಏಹಿ ಸೂರ್ಯ ಸಹಸ್ರಾಂಶೋ ತೇಜೋರಾಶೇ ಜಗತ್ಪತೇ ।
ಅನುಕಂಪಯ ಮಾಂ ಭಕ್ತ್ಯಾ ಗೃಹಾಣಾರ್ಘ್ಯಂ ನಮೋऽಸ್ತುತೇ ॥

ನಂತರ ಕೃಷ್ಣೆಗೆ, ಗಂಗೆಗೆ ಅರ್ಘ್ಯವನ್ನು ಕೊಡಬೇಕು.

ಕೃಷ್ಣೇ ಕೃಷ್ಣಾಂಗ ಸಂಭೂತೇ ಜಂತೂನಾಂ ಪಾಪಹಾರಿಣಿ ।
ನಮಸ್ತೇ ಸರಿತಾಂ ಶ್ರೇಷ್ಠೇ ಗೃಹಾಣಾರ್ಘ್ಯಂ ನಮೋऽಸ್ತುತೇ ॥

ಮಹಾಬಲೇಶ್ವರ ಜಟೋದ್ಭೂತೇ ಗಂಗೇ ಉಭಯತೋ ಮುಖೀ ।
ವೇದೇನ ಪ್ರಾರ್ಥಿತಾದೇವಿ ಗೃಹಾಣಾರ್ಘ್ಯಂ ನಮೋऽಸ್ತುತೇ ॥

ಶರೀರ ಶುದ್ಧಿಗಾಗಿ ಸ್ನಾನ ಮಾಡುವೆನೆಂದು ಸಂಕಲ್ಪಿಸಿ ಗೋಮಯ ಇತ್ಯಾದಿಗಳ ಸ್ನಾನ ಮಾಡಬೇಕು. ಗಂಧದ್ವಾರಾ ಮಂತ್ರದಿಂದ ಗೋಮಯ ತೆಗೆದುಕೊಂಡು ಪಾದದಿಂದ ತಲೆಯವರೆಗೆ ಹಚ್ಚಿಕೊಂಡು ಸ್ನಾನ ಮಾಡಿ ಆಚಮನ ಮಾಡಬೇಕು.

ತುಲಸೀ ಮೂಲಮೃತ್ತಿಕೆಯನ್ನು ತೆಗೆದುಕೊಂಡು ನೀರಲ್ಲಿ ನಾಲ್ಕು ದಿಕ್ಕುಗಳಲ್ಲಿ ಹಾಗೂ ಮಧ್ಯದಲ್ಲಿ ಓಂಕಾರ ಬರೆದು ದರ್ಭೆ, ಎಳ್ಳು, ವಿಷ್ಣುನಿರ್ಮಾಲ್ಯ, ತುಲಸೀ, ತೀರ್ಥವನ್ನು ಅಲ್ಲಿ ಹಾಕಿ ಶರೀರ ಶುದ್ಧ್ಯರ್ಥಂ ಮೃತ್ತಿಕಾಸ್ನಾನಮಹಂ ಕರಿಷ್ಯೇ ॥ ಎಂದು ಸಂಕಲ್ಪಿಸಿ ಮೃತ್ತಿಕೆಯನ್ನು ಸರ್ವಾಂಗಗಳಿಗೆ ಲೇಪಿಸಿಕೊಂಡು ಸ್ನಾನಮಾಡಬೇಕು.

ಪಾಪೋऽಹಂ ಪಾಪಕರ್ಮಾಹಂ ಪಾಪಾತ್ಮಾ ಪಾಪಸಂಭವಃ ।
ತ್ರಾಹಿಮಾಂ ಕೃಪಯಾ ಕೃಷ್ಣೇ ಸರ್ವಪಾಪಹರೋ ಹರ ॥
ಪ್ರಯಾಗಃ ಪ್ರಯಾಗಃ ಪ್ರಯಾಗಃ ॥

ಬ್ರಹ್ಮಾಂತಾ ಗುರವಃ ಸಾಕ್ಷಾತ್ ಇಷ್ಟಂ ದೈವಂ ಶ್ರಿಯಃ ಪತಿಃ ।
ಆಚಾರ್ಯಾಃ ಶ್ರೀಮದಾಚಾರ್ಯಾಃ ಸಂತು ಮೇ ಜನ್ಮ ಜನ್ಮನಿ ॥

ಬ್ರಾಹ್ಮಣರನ್ನು ಸ್ನಾನಕ್ಕೆ ಅನುಜ್ಞೆ ಕೇಳಬೇಕು– ಬ್ರಾಹ್ಮಣರು ಕೃಷ್ಣಾ ಭಾಗೀರಥೀ ಸ್ನಾನ ಫಲಸಿದ್ಧಿರಸ್ತು ॥ ಹೇಳಬೇಕು.

ಓಂ ಋತಂ ಚ ಸತ್ಯಂ ಚಾಭೀದ್ಧಾತ್..... ಈ ಮಂತ್ರದಿಂದ ಅಘಮರ್ಷಣ ಸ್ನಾನ ಮಾಡಬೇಕು.

ದಂಡೆಗೆ ಬಂದು ನಿರ್ಮಾಲ್ಯ ತುಲಸಿಯನ್ನು ಶಿರಸ್ಸಿನ ಮೇಲಿಟ್ಟುಕೊಂಡು ಮತ್ತೆ ಸ್ನಾನ ಮಾಡಿ ಸ್ನಾನಾಂಗ ಜಲತರ್ಪಣಕೊಡಬೇಕು.

1) **ಸವ್ಯದಿಂದ**– ಬ್ರಹ್ಮಾದಯೋ ದೇವಾಃ ತಾನ್ ದೇವಾನ್ ತರ್ಪಯಾಮಿ । ಭೂರ್ದೇವಾಂಸ್ತರ್ಪಯಾಮಿ । ಭುವರ್ದೇವಾಂಸ್ತರ್ಪಯಾಮಿ । ಸ್ವರ್ದೇವಾಂಸ್ತರ್ಪಯಾಮಿ । ಭೂರ್ಭುವಃ ಸ್ವರ್ದೇವಾಂಸ್ತರ್ಪಯಾಮಿ ॥

2) **ಮಾಲಾಕಾರದಿಂದ** – ಕೃಷ್ಣದ್ವೈಪಾಯನಾದಯೋ ಋಷಯಃ ತಾನ್ ಋಷೀನ್ ತರ್ಪಯಾಮಿ । ಭೂಃಋಷೀನ್ ತರ್ಪಯಾಮಿ । ಭುವಃ ಋಷೀನ್ ತರ್ಪಯಾಮಿ । ಸ್ವಃ ಋಷೀನ್ ತರ್ಪಯಾಮಿ । ಭೂರ್ಭುವಃ ಸ್ವರ್ಋಷೀಂಸ್ತರ್ಪಯಾಮಿ ॥

3) **ಅಪಸವ್ಯದಿಂದ** – ಸೋಮಃ ಪಿತೃಮಾನ್ ಯಮೋಽಂಗಿರಸ್ವಾನಗ್ನಿಷ್ವಾತ್ತಾಃ ಕವ್ಯವಾಹನಾದಯೋ ಯೇ ಪಿತರಃ ತಾನ್ ಪಿತೄಂಸ್ತರ್ಪಯಾಮಿ ॥

ಭೂಃ ಪಿತೄಂಸ್ತರ್ಪಯಾಮಿ । ಭುವಃ ಪಿತೄಂಸ್ತರ್ಪಯಾಮಿ ।
ಸ್ವಃ ಪಿತೄಂಸ್ತರ್ಪಯಾಮಿ । ಭೂರ್ಭುವಃಸ್ವಃ ಪಿತೄಂಸ್ತರ್ಪಯಾಮಿ ॥

ಶಿಖೋದಕಂ ಭೂಪತಿತಂ ಪಿಬಂತಿ ಪಿತರೋಽಖಿಲಾಃ ।
ತಸ್ಮಾತ್ ಶಿಖೋದಕಂ ದದ್ಯಾತ್ ಪಿತೃಣಾಂ ತೃಪ್ತಿ ಹೇತವೇ ॥

ಯೇ ಕೇಚಾಸ್ಮತ್ ಕುಲೇ ಜಾತಾ ಅಪುತ್ರಾ ಗೋತ್ರಿಣೋ ಮೃತಾಃ ।
ತೇ ಗೃಹ್ಣಂತು ಮಯಾದತ್ತಂ ಸೂತ್ರ ನಿಷ್ಪೀಡನೋದಕಂ ॥

ಯನ್ಮಯಾದೂಷಿತಂ ತೋಯಂ ಶಾರೀರಮಲಸಂಭವಾತ್ ।
ತದ್ದೋಷ ಪರಿಹಾರಾರ್ಥಂ ಯಕ್ಷ್ಮಾಣಂ ತರ್ಪಯಾಮ್ಯಹಮ್ ॥

ಈ ಮಂತ್ರದಿಂದ ಯಕ್ಷ್ಮ ತರ್ಪಣಕೊಡಬೇಕು.

ಜ್ಞಾನತೋಽಜ್ಞಾನತೋವಾಪಿ ಯನ್ಮೇದುಶ್ಚರಿತಂ ಮಮ ।
ಕ್ಷಮ್ಯತಾಮಖಿಲಂ ದೇವೀ ಜಗನ್ಮಾತರ್ನಮೋಽಸ್ತುತೇ ॥

ಎಂಬುದಾಗಿ ನದೀ ಅಭಿಮಾನಿದೇವತೆಗೆ ಪ್ರಾರ್ಥಿಸಬೇಕು.

ನಂತರ ಮನೆಗೆ ಬಂದು ಸಂಧ್ಯಾದಿ ಎಲ್ಲ ನಿತ್ಯಕರ್ಮಗಳನ್ನು ಮಾಡಿ ಯಥಾಶಕ್ತಿ ಉಪವಾಸವನ್ನು ಮಾಡಬೇಕು.

* * *

# ಶ್ರಾದ್ಧಮಾಡುವಾಗ ವಿಭಕ್ತಿ ನಿಯಮಗಳು

ಶ್ರಾದ್ಧಕರ್ಮವನ್ನು ಮಾಡುವಾಗ ಬೇರೆ ಬೇರೆ ಪ್ರಸಂಗಗಳಲ್ಲಿ ಬೇರೆ ಬೇರೆ ವಿಭಕ್ತಿಗಳನ್ನು ಬಳಸಿ ಕ್ರಿಯೆಗಳನ್ನು ಮಾಡಬೇಕು–

ಸಂಕಲ್ಪಾಸನಯೋಃ ಷಷ್ಠೀ ದ್ವಿತೀಯಾಽಽವಾಹನೇ ತಥಾ ।
ಅನ್ನದಾನೇ ಚತುರ್ಥೀ ಸ್ಯಾಚ್ಛೇಷಾಃ ಸಂಬುದ್ಧಯಃ ಸ್ಮೃತಾಃ ॥
(ನಿರ್ಣಯಸಿಂಧು)

ಶ್ರಾದ್ಧ ಸಂಕಲ್ಪ ಮಾಡುವಾಗ ಆಸನಗಳಲ್ಲಿ ಷಷ್ಠೀ ವಿಭಕ್ತಿಯನ್ನು ಉಪಯೋಗಿಸಿ ಉಚ್ಚರಿಸಬೇಕು.

ಪಿಂಡದಾನಕಾಲದಲ್ಲಿ ಚತುರ್ಥಿ ವಿಭಕ್ತಿಯನ್ನು ಉಪಯೋಗಿಸಬೇಕು.

ಪಿಂಡಪ್ರದಾನ ಕಾಲದಲ್ಲಿ ಸಂಬೋಧನವಾಗಿ ಮತ್ತು ಚತುರ್ಥ್ಯಂತವಾಗಿ ಉಚ್ಚರಿಸಬೇಕು.

1. ಪಿತೃ ಪಿತಾಮಹ ಪ್ರಪಿತಾಮಹಾನಾಂ....
ಮಾತೃ ಪಿತಾಮಹೀ ಪ್ರಪಿತಾಮಹೀನಾಂ.... ತೃಪ್ತ್ಯರ್ಥಂ....
ಶ್ರಾದ್ಧಕರ್ಮ ಕರಿಷ್ಯೇ ॥ **ಸಂಕಲ್ಪ**

2. ಪಿತೃ ಪಿತಾಮಹ ಪ್ರಪಿತಾಮಹಾನಾಂ ಸ್ಥಾನೇ ಇದಮಾಸನಂ ॥
**ಆಸನ**

3. ಪಿತ್ರೇ ಶರ್ಮಣೇ ಗೋತ್ರಾಯ ವಸುರೂಪಾಯ ಯೇ ಚ ತಮನುಗಚ್ಛಂತಿ ತೇಭ್ಯಶ್ಚ ಅಯಂ ಪಿಂಡಃ ತಸ್ಮೈತೇ ಸ್ವಧಾನಮಃ ॥ (ಮಾತೃಪಿಂಡ ದಾನಕಾಲದಲ್ಲಿ–ತಾಭ್ಯಶ್ಚ ಅಯಂ ಪಿಂಡಃ ತಸ್ಯೈತೇ ಸ್ವಧಾನಮಃ ಹೇಳಬೇಕು) **ಪಿಂಡದಾನ**

* * *

# ತೀರ್ಥ ಶ್ರಾದ್ಧ ಸಂಕಲ್ಪ ಮಾಡುವ ವಿಧಾನ

ಆಚಮನ ಮಾಡಿ, ಪವಿತ್ರ ಧಾರಣ ಮಾಡಿ, ಪ್ರಾಣಾಯಾಮ, ದೇಶಕಾಲಗಳನ್ನು ಹೇಳಿ, ಅಪಸವ್ಯದಿಂದ–

1. ಅಸ್ಮತ್ ಸಮಸ್ತ ಪಿತೃ ಪಿತಾಮಹ ಪ್ರಪಿತಾಮಹಾನಾಂ ಶರ್ಮಣಾಂ ಗೋತ್ರಾಣಾಂ, ವಸುರುದ್ರಆದಿತ್ಯಾಂತರ್ಗತ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಪ್ರದ್ಯುಮ್ನಸಂಕರ್ಷಣ ವಾಸುದೇವಾನಾಂ, (ಕನ್ಯಾಗತೇ) ತೀರ್ಥಶ್ರಾದ್ಧಕರ್ಮ ಕರಿಷ್ಯಮಾಣಃ ಇತ್ಯಾದಿ–
2. ಮಾತೃ, ಪಿತಾಮಹಿ, ಪ್ರಪಿತಾಮಹೀನಾಂ .... ಶರ್ಮದಾನಾಂ ..... ಗೋತ್ರಾಣಾಂ.... ವಸು.... ಪ್ರದ್ಯುಮ್ನ ಸಂಕರ್ಷಣ ವಾಸುದೇವಾನಾಂ
3. ಸಾಪತ್ನ್ಯ ಜನನ್ಯಾಃ.... ಶರ್ಮದಾಂಯಾ ಗೋತ್ರಾಂಯಾಃ ವಸ್ವಂತರ್ಗತ...... ಶ್ರೀಪ್ರದ್ಯುಮ್ನಸ್ಯ....
4. ಮಾತಾಮಹ, ಮಾತುಃ ಪಿತಾಮಹ, ಮಾತುಃ ಪ್ರಪಿತಾಮಹಾನಾಂ ಶರ್ಮಣಾಂ ಗೋತ್ರಾಣಾಂ ಸಪತ್ನೀಕಾನಾಂ ವಸುರುದ್ರಾದಿತ್ಯಾಂತರ್ಗತ ಭಾರತೀರಮಣಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಸ್ಯ
5. ಆತ್ಮಪತ್ನ್ಯಾಃ ಶರ್ಮದಾಯಾಃ ಗೋತ್ರಾಯಾಃ ವಸ್ವಂತರ್ಗತ ಭಾ.ಮು. ಶ್ರೀ ಪ್ರದ್ಯುಮ್ನಸ್ಯ
6. ಪುತ್ರಸ್ಯ ಶರ್ಮಣಃ ಗೋತ್ರಸ್ಯ ವಸ್ವಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀ ಪ್ರದ್ಯುಮ್ನಸ್ಯ
7. ದುಹಿತುಃ ಶರ್ಮದಾಯಾಃ ಗೋತ್ರಾಯಾಃ ಸಭರ್ತೃಕಾಯಾಃ ವಸ್ವಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀ ಪ್ರದ್ಯುಮ್ನಸ್ಯ
8. ಪಿತೃವ್ಯಸ್ಯ ಸಪತ್ನೀಕಸ್ಯ ಸಸುತಸ್ಯ (ಮೃತರಾಗಿದ್ದರೆ) ಶರ್ಮಣಃ ಗೋತ್ರಸ್ಯ ವಸ್ವಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀ ಪ್ರದ್ಯುಮ್ನಸ್ಯ

9. ಮಾತುಲಸ್ಯ ಸಪತ್ನೀಕಸ್ಯ ಸಸುತಸ್ಯ ಶರ್ಮಣಃ ಗೋತ್ರಸ್ಯ ವಸ್ವಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀ ಪ್ರದ್ಯುಮ್ನಸ್ಯ

10. ಭ್ರಾತುಃ ಸಪತ್ನೀಕಸ್ಯ ಸಸುತಸ್ಯ ಶರ್ಮಣಃ ಗೋತ್ರಸ್ಯ ವಸ್ವಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀ ಪ್ರದ್ಯುಮ್ನಸ್ಯ

11. ಪಿತೃಭಗಿನ್ಯಾಃ ಸಭರ್ತೃಕಾಯಾಃ ಸಸುತಾಯಾಃ ಗೋತ್ರಸ್ಯ ವಸ್ವಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀ ಪ್ರದ್ಯುಮ್ನಸ್ಯ

12. ಮಾತೃಭಗಿನ್ಯಾಃ ಸಭರ್ತೃಕಾಯಾಃ ಸಸುತಾಯಾಃ ಗೋತ್ರಾಯಾಃ ವಸ್ವಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀ ಪ್ರದ್ಯುಮ್ನಸ್ಯ

13. ಆತ್ಮಭಗಿನ್ಯಾಃ ಸಭರ್ತೃಕಾಯಾಃ ಸಸುತಾಯಾಃ ಗೋತ್ರಾಯಾಃ ವಸ್ವಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀ ಪ್ರದ್ಯುಮ್ನಸ್ಯ

14. ಶ್ವಶುರಸ್ಯ ಸಪತ್ನೀಕಸ್ಯ ಸಸುತಸ್ಯ ಗೋತ್ರಸ್ಯ ವಸ್ವಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀ ಪ್ರದ್ಯುಮ್ನಸ್ಯ

15. ಗುರೋಃ ಸಪತ್ನೀಕಸ್ಯ ಸಸುತಸ್ಯ ಗೋತ್ರಸ್ಯ ವಸ್ವಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀ ಪ್ರದ್ಯುಮ್ನಸ್ಯ

16. ಶಿಷ್ಯಸ್ಯ ಸಪತ್ನೀಕಸ್ಯ ಸಸುತಸ್ಯ ಗೋತ್ರಸ್ಯ ವಸ್ವಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀ ಪ್ರದ್ಯುಮ್ನಸ್ಯ

17. ಆಪ್ತಸ್ಯ ಸಪತ್ನೀಕಸ್ಯ ಸಸುತಸ್ಯ ಗೋತ್ರಸ್ಯ ವಸ್ವಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀ ಪ್ರದ್ಯುಮ್ನಸ್ಯ

(ಇತ್ಯಂತಂ ಇಲ್ಲಿಯವರೆಗೆ ಸಂಕಲ್ಪದಲ್ಲಿ ಷಷ್ಠೀ ವಿಭಕ್ತಿ ಇರಬೇಕು)

(ಮಹಾಲಯ / ತೀರ್ಥಶ್ರಾದ್ಧಗಳಲ್ಲಿ ಧುರಿ ಲೋಚನ ಸಂಜ್ಞಕ ವಿಶ್ವೇದೇವತೆಗಳನ್ನು ಆವಾಹಿಸಬೇಕು.)

* * * * *

# ಋಗ್ವೇದೀಯ ಪಿಂಡಪ್ರದಾನ ತೀರ್ಥಶ್ರಾದ್ಧ ವಿಧಾನ

ಎರಡನೆಯ ದಿನ ಸಂಕಲ್ಪಪೂರ್ವಕ ಸ್ನಾನವನ್ನು ಮಾಡಿ ಸ್ನಾನಾಂಗ ಜಲತರ್ಪಣಾದಿಗಳನ್ನು ಕೊಟ್ಟು, ಸಂಧ್ಯಾ, ದೇವಪೂಜಾ, ಬ್ರಹ್ಮಯಜ್ಞ, ಮೊದಲಾದ ನಿತ್ಯ ಕರ್ಮಗಳನ್ನು ಮಾಡಿ, ತೀರ್ಥಶ್ರಾದ್ಧಾಂಗ ತಿಲತರ್ಪಣಕೊಟ್ಟು ಶ್ರಾದ್ಧವನ್ನು ಪ್ರಾರಂಭಿಸಬೇಕು.

**ಪಿತೃತರ್ಪಣಕ್ರಮ (ಅಪಸವ್ಯದಿಂದ)**

ಅಸ್ಮತ್ ಪಿತರಂ.....ಶರ್ಮಾಣಂ....ಗೋತ್ರಂ.... ವಸ್ವಂತರ್ಗತ ಮುಖ್ಯ ಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾನಮಸ್ತರ್ಪಯಾಮಿ-3

ಅಸ್ಮತ್ ಪಿತಾಮಹಂ..... ಶರ್ಮಾಣಂ....ಗೋತ್ರಂ....... ರುದ್ರಾಂತರ್ಗತ ಮುಖ್ಯಪ್ರಾಣಾಂತರ್ಗತ ಸಂಕರ್ಷಣಂ ಸ್ವಧಾನಮಸ್ತರ್ಪಯಾಮಿ–3

ಅಸ್ಮತ್ ಪ್ರಪಿತಾಮಹಂ.....ಶರ್ಮಾಣಂ....ಗೋತ್ರಂ.... ಆದಿತ್ಯಾಂತರ್ಗತ ಮುಖ್ಯಪ್ರಾಣಾಂತರ್ಗತ ವಾಸುದೇವಂ ಸ್ವಧಾನಮಸ್ತರ್ಪಯಾಮಿ–3

ಅಸ್ಮತ್ ಮಾತರಂ.....ದಾಂ....ಗೋತ್ರಾಂ.... ವಸ್ವಂತರ್ಗತ ಮುಖ್ಯ ಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾನಮಸ್ತರ್ಪಯಾಮಿ–3

ಅಸ್ಮತ್ ಪಿತಾಮಹೀಂ.....ದಾಂ....ಗೋತ್ರಂ.... ರುದ್ರಾಂತರ್ಗತ ಮುಖ್ಯಪ್ರಾಣಾಂತರ್ಗತ ಸಂಕರ್ಷಣಂ ಸ್ವಧಾನಮಸ್ತರ್ಪಯಾಮಿ–3

ಅಸ್ಮತ್ ಪ್ರಪಿತಾಮಹೀಂ.....ದಾಂ....ಗೋತ್ರಂ.... ಆದಿತ್ಯಾಂತರ್ಗತ ಮುಖ್ಯಪ್ರಾಣಾಂತರ್ಗತ ವಾಸುದೇವಂ ಸ್ವಧಾನಮಸ್ತರ್ಪಯಾಮಿ–3

ಅಸ್ಮತ್ ಸಾಪತ್ನಜನನೀಂ.....ದಾಂ....ಗೋತ್ರಂ.... ವಸ್ವಂತರ್ಗತ ಮುಖ್ಯ ಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾನಮಸ್ತರ್ಪಯಾಮಿ–3

ಅಸ್ಮತ್ ಮಾತಾಮಹಂ.....ಶರ್ಮಾಣಂ....ಗೋತ್ರಂ......ವಸ್ವಂತರ್ಗತ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾನಮಸ್ತರ್ಪಯಾಮಿ–3

ಅಸ್ಮತ್ ಮಾತುಃ ಪಿತಾಮಹಂ.....ಶರ್ಮಾಣಂ....ಗೋತ್ರಂ.... ರುದ್ರಾಂತರ್ಗತ ಮುಖ್ಯಪ್ರಾಣಾಂತರ್ಗತ ಸಂಕರ್ಷಣಂ ಸ್ವಧಾನಮಸ್ತರ್ಪಯಾಮಿ–3

ಅಸ್ಮತ್ ಮಾತುಃ ಪ್ರಪಿತಾಮಹಂ....ಶರ್ಮಾಣಂ....ಗೋತ್ರಂ... ಆದಿತ್ಯಾಂತರ್ಗತ ಮುಖ್ಯಪ್ರಾಣಾಂತರ್ಗತ ವಾಸುದೇವಂ ಸ್ವಧಾನಮಸ್ತರ್ಪಯಾಮಿ-3

ಅಸ್ಮತ್ ಮಾತಾಮಹೀಂ.... ದಾಂ.... ಗೋತ್ರಾಂ.... ವಸ್ವಂತರ್ಗತ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾನಮಸ್ತರ್ಪಯಾಮಿ-1

ಅಸ್ಮತ್ ಮಾತುಃ ಪಿತಾಮಹೀಂ....ದಾಂ....ಗೋತ್ರಾಂ.... ರುದ್ರಾಂತರ್ಗತ ಮುಖ್ಯಪ್ರಾಣಾಂತರ್ಗತ ಸಂಕರ್ಷಣಂ ಸ್ವಧಾನಮಸ್ತರ್ಪಯಾಮಿ-1

ಅಸ್ಮತ್ ಮಾತುಃ ಪ್ರಪಿತಾಮಹೀಂ.... ದಾಂ.... ಗೋತ್ರಾಂ.... ಆದಿತ್ಯಾಂತರ್ಗತ ಮುಖ್ಯಪ್ರಾಣಾಂತರ್ಗತ ವಾಸುದೇವಂ ಸ್ವಧಾನಮಸ್ತರ್ಪಯಾಮಿ-1

ಆತ್ಮ ಪತ್ನೀಂ....ದಾಂ....ಗೋತ್ರಾಂ... ವಸ್ವಂತರ್ಗತ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾನಮಸ್ತರ್ಪಯಾಮಿ-2

ಅಸ್ಮತ್ ಸಪತ್ನೀಕಂ....(ಸುತಂ)....ಶರ್ಮಾಣಂ.....ಗೋತ್ರಂ... ವಸ್ವಂತರ್ಗತ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾನಮಸ್ತರ್ಪಯಾಮಿ-1

ಅಸ್ಮತ್ ಭ್ರಾತರಂ....ಶರ್ಮಾಣಂ.....ಗೋತ್ರಂ..... ವಸ್ವಂತರ್ಗತ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾನಮಸ್ತರ್ಪಯಾಮಿ-1

ಅಸ್ಮತ್ ಪಿತೃವ್ಯಂ....ಶರ್ಮಾಣಂ....ಗೋತ್ರಂ... ವಸ್ವಂತರ್ಗತ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾನಮಸ್ತರ್ಪಯಾಮಿ-1

ಅಸ್ಮತ್ ಮಾತುಲಂ....ಶರ್ಮಾಣಂ.....ಗೋತ್ರಂ..... ವಸ್ವಂತರ್ಗತ ಮುಖ್ಯ ಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾನಮಸ್ತರ್ಪಯಾಮಿ-1

ಅಸ್ಮತ್ ದುಹಿತರಂ....(ಸಭರ್ತೃಕಾಂ ಸಸುತಾಂ) ದಾಂ.....ಗೋತ್ರಾಂ..... ವಸ್ವಂತರ್ಗತ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾನಮಸ್ತರ್ಪಯಾಮಿ-1

ಅಸ್ಮತ್ ಭಗಿನೀಂ....ದಾಂ.....ಗೋತ್ರಾಂ..... ವಸ್ವಂತರ್ಗತ ಮುಖ್ಯ ಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾನಮಸ್ತರ್ಪಯಾಮಿ-1

ಅಸ್ಮತ್ ಪಿತೃಸ್ವಸಾರಂ .... ದಾಂ..... ಗೋತ್ರಾಂ..... ವಸ್ವಂತರ್ಗತ ಮುಖ್ಯ ಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾನಮಸ್ತರ್ಪಯಾಮಿ-1

ಅಸ್ಮತ್ ಮಾತೃಸ್ವಸಾರಂ....ದಾಂ.....ಗೋತ್ರಾಂ..... ವಸ್ವಂತರ್ಗತ ಮುಖ್ಯ ಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾನಮಸ್ತರ್ಪಯಾಮಿ–1

ಅಸ್ಮತ್ ಶ್ವಶುರಂ....(ಸಪತ್ನೀಕಂ).....ಶರ್ಮಾಣಂ .... ಗೋತ್ರಾಂ..... ವಸ್ವಂತರ್ಗತ ಮುಖ್ಯ ಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾನಮಸ್ತರ್ಪಯಾಮಿ–1

ಅಸ್ಮತ್ ಗುರುಂ.... ಶರ್ಮಾಣಂ..... ಗೋತ್ರಂ..... ವಸ್ವಂತರ್ಗತ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾನಮಸ್ತರ್ಪಯಾಮಿ–2

ಅಸ್ಮತ್ ಆಚಾರ್ಯಂ...ಶರ್ಮಾಣಂ.....ಗೋತ್ರಂ..... ವಸ್ವಂತರ್ಗತ ಮುಖ್ಯ ಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾನಮಸ್ತರ್ಪಯಾಮಿ–2

ಆಬ್ರಹ್ಮಸ್ತಂಭ ಪರ್ಯಂತಂ ದೇವರ್ಷಿಪಿತೃಮಾನವಾಃ ।
ತೃಪ್ಯಂತುಪಿತರಃ ಸರ್ವೇ ಮಾತೃಮಾತಾಮಹಾದಯಃ ॥
ಅತೀತ ಕುಲಕೋಟೀನಾಂ ಸಪ್ತದ್ವೀಪನಿವಾಸಿನಾಂ ।
ಆಬ್ರಹ್ಮಭುವನಾಲ್ಲೋಕಾದಿದಮಸ್ತು ಕುಶೋದಕಂ ॥
ಯೇ ಕೇ ಚಾಸ್ಮತ್ಕುಲೇ ಜಾತಾ ಅಪುತ್ರಾ ಗೋತ್ರಿಣೋ ಮೃತಾಃ।

ತೇಗೃಹ್ಣಂತು ಮಯಾ ದತ್ತಂ ಸೂತ್ರ ನಿಷ್ಪೀಡನೋದಕಂ ॥
ಯಸ್ಯಸ್ಮೃತ್ಯಾಚ......ಪರಿಪೂರ್ಣಂ ತದಸ್ತುಮೇ ॥
ಅನೇನ ತೀರ್ಥಶ್ರಾದ್ಧಾಂಗ ತಿಲತರ್ಪಣೇನ ಭಗವಾನ್ ಶ್ರೀಮಜ್ಜನಾರ್ದನ ವಾಸುದೇವಃ ಪ್ರೀಯತಾಂ ಪ್ರೀತೋಭವತು ॥

ಶ್ರೀಮಧ್ವಾಂತರ್ಗತ ಶ್ರೀಕೃಷ್ಣಾರ್ಪಣಮಸ್ತು ॥ ದ್ವಿರಾಚಾಮೇತ್ ॥ ವಿಷ್ಣವೇನಮೋ ವಿಷ್ಣವೇನಮೋ ವಿಷ್ಣವೇ ನಮಃ ॥

ತೀರ್ಥಶ್ರಾದ್ಧದಲ್ಲಿ ಅರ್ಘ್ಯ, ಆವಾಹನ, ತೃಪ್ತಿಪ್ರಶ್ನೆ, ವಿಕಿರ, ದ್ವಿಜಾಂಗುಷ್ಠನಿವೇದನ, ಈ ಐದನ್ನೂ ವರ್ಜಿಸಬೇಕು.[1]

ಸಕೃನ್ಮಹಾಲಯದಂತೆ ಎಲ್ಲ ಪಿತೃಗಣ ಉದ್ದೇಶಿಸಿ ಧುರಿಲೋಚನ ಸಂಜ್ಞಕರಾದ ವಿಶ್ವೇದೇವತೆಗಳ ಸಹಿತ ತೀರ್ಥಶ್ರಾದ್ಧವನ್ನು ಮಾಡಬೇಕು.[2]

---

1. ಅರ್ಘ್ಯಮಾವಾಹನಂ ಚೈವ ದ್ವಿಜಾಂಗುಷ್ಠ ನಿವೇದನಮ್ ।
ತೃಪ್ತಿಃ ಪ್ರಶ್ನಂ ಚ ವಿಕಿರಂ ತೀರ್ಥೇ ಪಂಚ ವಿವರ್ಜಯೇತ್ ॥ (ಪುರಾಣವಚನ)
2. ಸಕೃನ್ಮಹಾಲಯವತ್ ಸರ್ವಪಿತೃಗಣೋದ್ದೇಶೇನ ಧುರಿಲೋಚನ ಸಂಜ್ಞಕ ವಿಶ್ವೇದೇವಸಹಿತಂ ತೀರ್ಥಶ್ರಾದ್ಧಂ ಕುರ್ಯಾತ್ ॥ (ಪುರಾಣವಚನ)

ಶ್ರಾದ್ಧಮಾಡುವ ದಿನದಂದು ಶ್ರಾದ್ಧಕರ್ತೃವು ಶ್ರಾದ್ಧಕರ್ಮಕ್ಕೆ ಬೇಕಾಗುವ ಎಲ್ಲ ಸಾಮಗ್ರಿಗಳನ್ನು, ನಿಷಿದ್ಧವಲ್ಲದ ಪದಾರ್ಥಗಳನ್ನು ಸಿದ್ಧಪಡಿಸಿ ಇಟ್ಟುಕೊಳ್ಳಬೇಕು.

ಶ್ರಾದ್ಧಕರ್ತೃವು ಮಡಿನೀರಿನಿಂದ ಸ್ನಾನಮಾಡಿ, ಶುಚಿಯಾದ ಮಡಿ ಬಟ್ಟೆಗಳನ್ನು ಉಟ್ಟುಕೊಂಡು, ಗೋಪೀಚಂದನ, ಮುದ್ರಾಧಾರಣೆ ಮಾಡಿಕೊಂಡು, ಸಂಧ್ಯಾ, ದೇವಪೂಜಾದಿಗಳನ್ನು ಮಾಡಿ ಶ್ರಾದ್ಧಕರ್ಮಕ್ಕೆ ಬೇಕಾಗುವ ಅನ್ನವನ್ನು ಪಾಯಸ, ಘಾರಿಗೆ ಇತ್ಯಾದಿ ಪದಾರ್ಥಗಳನ್ನು, ಹಾಗೂ ಚಟಕ ಬ್ರಾಹ್ಮಣರಿಗೆ ಕೊಡುವ, ಪಿಂಡಪ್ರದಾನ, ಶ್ರಾದ್ಧ ಕಾರ್ಯಕ್ಕೆ ಉಪಯೋಗಿಸುವ ಹಣ್ಣು, ಜೇನುತುಪ್ಪ, ಎಳ್ಳು, ಸಕ್ಕರೆ, ಅಡಿಕೆ, ವೀಳ್ಯದೆಲೆ, ಹಾಲು, ಮೊಸರು, ಭೃಂಗರಾಜ ಪತ್ರ (ಕಾಡಿಗ್ಗರಗು) ಇತ್ಯಾದಿ ಎಲ್ಲ ಪದಾರ್ಥಗಳನ್ನು ಭಗವಂತನಿಗೆ ನಿವೇದಿಸಿ, ವೈಶ್ವದೇವ ಮಾಡಿ, ಶ್ರಾದ್ಧಕರ್ಮವನ್ನು ದಕ್ಷಿಣಕ್ಕೆ ಮುಖ ಮಾಡಿ ಕುಳಿತು ಮಾಡಬೇಕು.

**ಪಿಂಡಪ್ರದಾನ ಶ್ರಾದ್ಧ ಪ್ರಯೋಗ :**

ಶ್ರಾದ್ಧ ಕರ್ತೃವು ಪೂರ್ವಕ್ಕೆ ಮುಖಮಾಡಿ ಕುಳಿತು ಆಚಮನ ಮಾಡಿ ಪವಿತ್ರವನ್ನು – ಬ್ರಾಹ್ಮಣರಿಗೆ ಮುಟ್ಟಿಸಿ, ದಕ್ಷಿಣಕ್ಕೆ ತಿರುಗಿ

ಪವಿತ್ರಂ ತ್ತೇ ವಿತತಂ ಬ್ರಹ್ಮಣಸ್ಪತೇ ಪ್ರಭುರ್ಗಾತ್ರಾಣಿಪರ್ಯೇಷಿ ವಿಶ್ವತಃ ।
ಅತಪ್ತತನೂರ್ನತದಾಮೋ ಅಶ್ನುತೇ ಶೃತಾಸ ಇದ್ವಹಂ ತ್ತಸ್ತತ್ ಸಮಾಸತ ॥

ಈ ಮಂತ್ರ ಹೇಳುತ್ತ ಪವಿತ್ರ ಧರಿಸಿ ಮತ್ತೆ ಆಚಮನ ಮಾಡಬೇಕು. ಪ್ರಾಣಾಯಾಮ ಮಾಡಿ ಶ್ರೀಮದ್ಭಗವತೋ.... (ದೇಶಕಾಲಗಳನ್ನು ಉಚ್ಚರಿಸಿ) ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀವಿಷ್ಣುಪ್ರೇರಣಯಾ ಶ್ರೀವಿಷ್ಣು ಪ್ರೀತ್ಯರ್ಥಂ ಧುರಿಲೋಚನ ಸಂಜ್ಞಕಾನಾಂ ವಿಶ್ವೇಷಾಂ ದೇವಾನಾಂ

**ಅಪಸವ್ಯಂ** (ಜನಿವಾರ ಎಡಕ್ಕೆ ಹಾಕಿಕೊಂಡು) ಅಸ್ಮತ್ ಸಮಸ್ತ ಪಿತೃ ಪಿತಾಮಹ ಪ್ರಪಿತಾಮಹಾನಾಂ.... ಶರ್ಮಣಾಂ ಗೋತ್ರಾಣಾಂ ವಸುರುದ್ರ ಆದಿತ್ಯಾಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನ ಸಂಕರ್ಷಣ ವಾಸುದೇವಾನಾಂ ತೀರ್ಥಶ್ರಾದ್ಧಕರ್ಮ ಕರಿಷ್ಯಮಾಣಃ। ದೇಹೇಂದ್ರಿಯಾದೌ ಆತ್ಮಶುದ್ಧ್ಯರ್ಥಂ, ಗೃಹಶುದ್ಧ್ಯರ್ಥಂ, ಭಾಂಡಭಾಜನ

ಶುದ್ಧ್ಯರ್ಥಂ, ದ್ರವ್ಯಶುದ್ಧ್ಯರ್ಥಂ ಕಾಲಾತಿರಿಕ್ತ ದೋಷಪರಿಹಾರಾರ್ಥಂ ಪ್ರಾಯಶ್ಚಿತ್ತ ಸೂಕ್ತ ಜಾಪ್ಯಮಹಂ ಕರಿಷ್ಯೇ ॥ ತದಂಗ ಸವ್ಯೇನ ಯವೋದಕಂ, ಅಪಸವ್ಯೇನ ತಿಲೋದಕಂ ಚ ಕರಿಷ್ಯೇ ॥ (ಕುರುಷ್ವ) ಸವ್ಯದಿಂದ ಅಕ್ಕಿಕಾಳು ನೀರು ಮತ್ತು ಅಪಸವ್ಯದಿಂದ ಎಳ್ಳುನೀರು ಬಿಡಬೇಕು.

**ಪಾತ್ರಸ್ಥಾಪನಂ (ಸವ್ಯದಿಂದ)**

ಇದಂ ತ್ತೇ ಪಾತ್ರಂ ಸನವಿತ್ತಮಿಂದ್ರ ಪಿಬಾ ಸೋಮಮೇನಾ ಶತಕ್ರತೋ ।
ಪೂರ್ಣ ಆಹಾವೋ ಮದಿರಸ್ಯ ಮಧ್ವೋಯಂ ವಿಶ್ವ ಇದಭಿಹರ್ಯಂತಿದೇವಾಃ ॥

ಈ ಮಂತ್ರದಿಂದ ಚೌಕ ಮಂಡಲ ಮಾಡಿ ಎಳ್ಳು, ಅಕ್ಕಿಕಾಳು ಎರಡು ದರ್ಭೆಗಳನ್ನು ಮಂಡಲದ ಮೇಲೆ ಹಾಕಬೇಕು. ಅದರ ಮೇಲೆ ತಾಮ್ರ ಅಥವಾ ಬೆಳ್ಳಿಯ ಪಾತ್ರೆಯನ್ನು ಇಟ್ಟು-

ಇಮಂ ಮೇ ಗಂಗೇ ಯಮುನೇ ಸರಸ್ವತಿ ಶುತುದ್ರಿಸ್ತೋಮಂ ಸಚತಾ ಪರುಷ್ಣ್ಯಾ ।
ಅಸಿಕ್ನ್ಯಾ ಮರುದ್ವೃಧೇ ವಿತಸ್ತಯಾರ್ಜೀಕೀಯೇ ಶೃಣುಹ್ಯಾ ಸುಷೋಮಯಾ ॥

ಈ ಮಂತ್ರದಿಂದ ಪಾತ್ರೆಯಲ್ಲಿ ನೀರು ಹಾಕಬೇಕು.

**ಅಪಸವ್ಯದಿಂದ**

ಶರಾಸಃ ಕುಶರಾಸೋ ದರ್ಭಾಸಃ ಸೈರ್ಯಾ ಉತ ।
ಮೌಂಜಾ ಅದೃಷ್ಟಾ ಬೈರಿಣಾಃ ಸರ್ವೇ ಸಾಕಂ ನ್ಯಲಿಪ್ಸತ ॥

ಈ ಮಂತ್ರದಿಂದ ಪಾತ್ರೆಯಲ್ಲಿ ಎರಡು ದರ್ಭೆ ತುಂಡುಗಳನ್ನು ಮತ್ತು ಕೂರ್ಚವನ್ನು ಇಡಬೇಕು.

**ಸವ್ಯದಿಂದ**

ಯವೋಽಸಿ ಧಾನ್ಯರಾಜೋ ವಾ ವಾರುಣೋ ಮಧು ಸಂಯುತಃ ।
ನಿರ್ಣೋದಃ ಸರ್ವ ಪಾಪಾನಾಂ ಪವಿತ್ರಮೃಷಿಭಿಃ ಸ್ಮೃತಂ ॥

ಈ ಮಂತ್ರದಿಂದ ಪಾತ್ರೆಯಲ್ಲಿ ಅಕ್ಕಿಕಾಳು ಹಾಕಬೇಕು.

**ಅಪಸವ್ಯದಿಂದ**

ತಿಲೋಽಸಿ ಸೋಮದೈವತ್ಯೋ ಗೋಸವೇ ದೇವನಿರ್ಮಿತಃ ।
ಪ್ರತ್ನವದ್ಭಿಃ ಪ್ರತ್ನಸ್ವಧಯಾ ಪಿತೃನಿಮಾನ್ ಲೋಕಾನ್ ಪ್ರೀಣಯಾ ಹಿ ನಃ ಸ್ವಧಾ ನಮಃ ॥ ಈ ಮಂತ್ರದಿಂದ ಪಾತ್ರೆಯಲ್ಲಿ ಎಳ್ಳು ಹಾಕಬೇಕು.

**ಸವ್ಯದಿಂದ**

ಗಂಧದ್ವಾರಾಂ ದುರಾಧರ್ಷಾಂ ನಿತ್ಯಪುಷ್ಟಾಂ ಕರೀಷಿಣೀಂ ।
ಈಶ್ವರೀಂ ಸರ್ವಭೂತಾನಾಂ ತಾಮಿಹೋಪಹ್ವಯೇಶ್ರಿಯಂ ॥

ಈ ಮಂತ್ರದಿಂದ ಪಾತ್ರೆಯಲ್ಲಿ ಗಂಧ, ತುಲಸೀದಳ ಹಾಕಬೇಕು.

ಯಾಃ ಫಲಿನೀರ್ಯಾ ಅಫಲಾ ಅಪುಷ್ಪಾಯಾಶ್ಚ ಪುಷ್ಪಿಣೀಃ ।
ಬೃಹಸ್ಪತಿಪ್ರಸೂತಾಸ್ತಾನೋ ಮುಂಚಂತ್ವಂಹಸಃ ॥

ಈ ಮಂತ್ರದಿಂದ ಪಾತ್ರೆಯಲ್ಲಿ ಅಡಿಕೆ ಬೆಟ್ಟವನ್ನು ಹಾಕಬೇಕು.

ಸಹಿ ರತ್ನಾನಿ ದಾಶುಷೇ ಸುವಾತಿ ಸವಿತಾ ಭಗಃ ।
ತಂ ಭಾಗಂ ಚಿತ್ರಮೀಮಹೇ ॥

ಈ ಮಂತ್ರ ಹೇಳುತ್ತ ಪಾತ್ರೆಯಲ್ಲಿ ನಾಣ್ಯ ಹಾಕಬೇಕು.

ಈಗ ಪಾತ್ರೆಯನ್ನು ಮುಟ್ಟಿ ಪ್ರಾಯಶ್ಚಿತ್ತ ಸೂಕ್ತವನ್ನು ಪಠಣ ಮಾಡಬೇಕು.

1. ಓಂ ಸಹಸ್ರ ಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ ।
ಸ ಭೂಮಿಂ ವಿಶ್ವತೋ ವೃತ್ವಾತ್ಯತಿಷ್ಠದ್ದಶಾಂಗುಲಮ್ ॥
2. ಯಜ್ಞೇನ ಯಜ್ಞಮಯಜಂತ ದೇವಾಸ್ತಾನಿ ಧರ್ಮಾಣಿ ಪ್ರಥಮಾನ್ಯಾಸನ್ ।
ತೇ ಹ ನಾಕಂ ಮಹಿಮಾನಃ ಸಚಂತಯತ್ರ ಪೂರ್ವೇಸಾಧ್ಯಾಃಸಂತಿ ದೇವಾಃ ॥
3. ಓಂ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯಧೀಮಹಿ ।
ಧಿಯೋಯೋನಃ ಪ್ರಚೋದಯಾತ್ ॥ ಈ ಮಂತ್ರಗಳನ್ನು ಹೇಳಬೇಕು.
(ವೇಳೆ ಇದ್ದಾಗ ಪುರುಷಸೂಕ್ತವನ್ನು ಪೂರ್ತಿಯಾಗಿ ಹೇಳಬೇಕು.)

## ಮಾರ್ಜನಂ

ಈ ಕೆಳಗಿನ ಮಂತ್ರ ಹೇಳುತ್ತ ಎರಡು ದರ್ಭೆಗಳನ್ನು ತೆಗೆದುಕೊಂಡು ಪಾತ್ರೆಯಲ್ಲಿರುವ ಪವಿತ್ರವಾದ ನೀರಿನಿಂದ ತನಗೆ ಮಾರ್ಜನ ಮಾಡಿಕೊಳ್ಳಬೇಕು.

ಓಂ ಶುಚೀವೋ ಹವ್ಯಾ ಮರುತಃ ಶುಚೀನಾಂ ಶುಚಿಂ ಹಿ ನೋ ಮ್ಯಧ್ವರಂ ಶುಚಿಭ್ಯಃ ।

ಋತೇನ ಸತ್ಯಮೃತಸಾಪ ಆಯನ್ ಶುಚಿಜನ್ಮಾನಃ ಶುಚಯಃ ಪಾವಕಾಃ ॥

ಅಗ್ನಿಃ ಶುಚಿವ್ರತತಮಃ ಶುಚಿರ್ವಿಪ್ರಃ ಶುಚಿಃ ಕವಿಃ । ಶುಚಿರೋಚತ ಆಹುತಃ ॥

(ವೇಳೆ ಇದ್ದಾಗ ಈ ಸೂಕ್ತವನ್ನು ಪೂರ್ತಿಯಾಗಿ ಹೇಳಬೇಕು.)

ಅಪವಿತ್ರಃ ಪವಿತ್ರೋವಾ ಸರ್ವಾವಸ್ಥಾಂ ಗತೋಽಪಿವಾ ।
ಯಃ ಸ್ಮರೇತ್ ಪುಂಡರೀಕಾಕ್ಷಂ ಸ ಬಾಹ್ಯಾಭ್ಯಂತರಃ ಶುಚಿಃ ॥

ಸರ್ವಾಣಿ ಸ್ಥಲಾನಿ ಶುಚೀನಿ ಭವಂತು ॥ ಎಲ್ಲ ಸ್ಥಳಗಳೂ ಶುದ್ಧವಾಗಲೆಂದು ಹೇಳಿ (ಭಾಂಡಾದೀನಿ ಪ್ರೋಕ್ಷಯೇತ್) ಎಲ್ಲ ಪಾತ್ರೆಗಳಿಗೂ ಪ್ರೋಕ್ಷಣ ಮಾಡಬೇಕು.

## ಶ್ರೀಹರಿವಾಯುವಂದನಮ್

ಓಂ ನಾರಾಯಣಾಯ ಪರಿಪೂರ್ಣ ಗುಣಾರ್ಣವಾಯ
ವಿಶ್ವೋದಯಸ್ಥಿತಿಲಯೋನ್ನಿಯತಿ ಪ್ರದಾಯ
ಜ್ಞಾನಪ್ರದಾಯ ವಿಬುಧಾಸುರಸೌಖ್ಯದುಃಖ
ಸತ್ಕಾರಣಾಯ ವಿತತಾಯ ನಮೋ ನಮಸ್ತೇ ॥

ಓಂ ಮಾತರ್ಮೇ ಮಾತರಿಶ್ವನ್ ಪಿತರತುಲಗುರೋ ಭ್ರಾತರಿಷ್ಟಾಪ್ತಬಂಧೋ
ಸ್ವಾಮಿನ್ ಸರ್ವಾಂತರಾತ್ಮನ್ ಅಜರ ಜರಯಿತರ್ಜನ್ಮ ಮೃತ್ಯಾಮಯಾನಾಮ್ ।
ಗೋವಿಂದೇ ದೇಹಿ ಭಕ್ತಿಂ ಭವತಿ ಚ ಭಗವನ್ ಊರ್ಜಿತಾಂ ನಿರ್ನಿಮಿತ್ತಾಂ
ನಿರ್ವ್ಯಾಜಾಂ ನಿಶ್ಚಲಾಂ ಸದ್ಗುಣಗಣ ಬೃಹತೀಂ ಶಾಶ್ವತೀಮಾಶು ದೇವ ॥

ಈಗ ದೇವರ ಮುಂದೆ ಅಕ್ಕಿಕಾಳು, ಎರಡು ದರ್ಭೆತುಂಡು, ದಕ್ಷಿಣೆ ಇಟ್ಟು ನಮಸ್ಕರಿಸಬೇಕು. ಎರಡು ಎಲೆ ತುಂಡುಗಳಲ್ಲಿ ದೇವಸ್ಥಾನ, ಪಿತೃಸ್ಥಾನಕ್ಕೆ ಬ್ರಾಹ್ಮಣರ ಪ್ರತಿನಿಧಿಯಾಗಿ ದರ್ಭೆಯ ಪವಿತ್ರ ಇಟ್ಟು ಶ್ರಾದ್ಧಕರ್ಮ ಪ್ರಾರಂಭಿಸಬೇಕು.[3]

---

3. ದರ್ಭೆಯ (ಬ್ರಾಹ್ಮಣರನ್ನು) ದೇವಸ್ಥಾನ ಬ್ರಾಹ್ಮಣರನ್ನು ಪೂರ್ವಾಭಿಮುಖವಾಗಿ ದರ್ಭೆಯ (ಬ್ರಾಹ್ಮಣರನ್ನು) ಪಿತೃ ಸ್ಥಾನ ಬ್ರಾಹ್ಮಣರನ್ನು ಉತ್ತರಾಭಿಮುಖವಾಗಿ ಕೂಡಿಸಬೇಕು.

**ಅಪಸವ್ಯೇನ – ಅಸ್ಮತ್ ಪಿತ್ರಂತರ್ಯಾಮಿಣಃ ನಮಃ ।**

**ಸವ್ಯೇನ – ವಿಶ್ವೇದೇವಾಂತರ್ಯಾಮಿಣಃ ನಮಃ ॥**

ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ ಶ್ರೀವಾಸುದೇವಾತ್ಮಕ ಚತುರ್ಮೂರ್ತಿ ಶ್ರಾದ್ಧಸ್ವಾಮೀ ಶ್ರೀಮಧ್ವವಲ್ಲಭ ಜನಾರ್ದನ ಸಮಾರಾಧನಂ ಕರಿಷ್ಯೇ ॥ ಹೇಳಿ ಅಕ್ಕಿಕಾಳು ನೀರು ಬಿಡಬೇಕು. ಸವ್ಯದಿಂದ–

## ಬ್ರಹ್ಮದಂಡ

ದರ್ಭೆ (ತುಂಡುಗಳು), ಅಕ್ಕಿಕಾಳು, ಎಳ್ಳು, ದಕ್ಷಿಣೆ, ಗೋಪೀಚಂದನ ಇವುಗಳನ್ನು ಒಂದು ತಟ್ಟೆಯಲ್ಲಿಟ್ಟುಕೊಂಡು ಪವಿತ್ರದಲ್ಲಿ ಇರುವ ಬ್ರಾಹ್ಮಣರಿಗೆ ಮೂರು ಪ್ರದಕ್ಷಿಣೆಗಳನ್ನು (ಕೆಳಗಿನ ಮಂತ್ರ ಹೇಳುತ್ತ) ಹಾಕಬೇಕು.

ಓಂ ಸಮಸ್ತ ಸಂಪತ್ ಸಮವಾಪ್ತಿಹೇತವಃ ಸಮುತ್ಥಿತಾಪತ್ಕುಲ ಧೂಮಕೇತವಃ ।
ಅಪಾರ ಸಂಸಾರ ಸಮುದ್ರ ಸೇತವಃ ಪುನಂತು ಮಾಂ ಬ್ರಾಹ್ಮಣಪಾದಪಾಂಸವಃ ॥
ಆಪದ್ಘನಧ್ವಾಂತ ಸಹಸ್ರಭಾನವಃ ಸಮೀಹಿತಾರ್ಥಾರ್ಪಣ ಕಾಮಧೇನವಃ ।
ಸಮಸ್ತ ತೀರ್ಥಾಂಬು ಪವಿತ್ರಮೂರ್ತಯೋ ರಕ್ಷಂತು ಮಾಂ ಬ್ರಾಹ್ಮಣಪಾದಪಾಂಸವಃ ॥

ವಿಪ್ರೌಘದರ್ಶನಾತ್ ಕ್ಷಿಪ್ರಂ ಕ್ಷೀಯಂತೇ ಪಾಪರಾಶಯಃ ।
ವಂದನಾನ್ಮಂಗಲಾವಾಪ್ತಿರರ್ಚನಾದಚ್ಯುತಂ ಪದಂ ॥
ಆಧಿವ್ಯಾಧಿ ಹರಂ ನೃಣಾಂ ಮೃತ್ಯುದಾರಿದ್ರ್ಯನಾಶನಂ ।
ಶ್ರೀಪುಷ್ಟಿಕೀರ್ತಿದಂ ವಂದೇ ವಿಪ್ರಶ್ರೀಪಾದಪಂಕಜಮ್ ॥

ನಂತರ ಆ ತಟ್ಟೆಯನ್ನು ಕೆಳಗೆ ಇಡಬೇಕು.

ಓಂ ಯಾವತೀರ್ವೈದೇವತಾಸ್ತಾಃ ಸರ್ವಾ ವೇದವಿದಿ ಬ್ರಾಹ್ಮಣೇ ವಸಂತಿ ।
ತಸ್ಮಾತ್ ಬ್ರಾಹ್ಮಣೇಭ್ಯೋ ವೇದವಿದ್ಭ್ಯೋ ದಿವೇ ದಿವೇ ನಮಸ್ಕುರ್ಯಾತ್ ।
ನಾಶ್ಲೀಲಂ ಕೀರ್ತಯೇದೇತಾ ಏವ ದೇವತಾಃ ಪ್ರೀಣಾತಿ ॥

ನಮೋ ದೇವೇಭ್ಯಃ ಎಂದು ಹೇಳಿ ಎರಡು ನಮಸ್ಕಾರಗಳನ್ನು ದೇವಸ್ಥಾನ ಬ್ರಾಹ್ಮಣರಿಗೆ (ಸವ್ಯದಿಂದ) ಮಾಡಬೇಕು.

**ಅಪಸವ್ಯಂ** – ಅಪಸವ್ಯದಿಂದ ಸ್ವಧಾ ಪಿತೃಭ್ಯಃ ಎಂದು ಹೇಳಿ ಪಿತೃಸ್ಥಾನ ಬ್ರಾಹ್ಮಣರಿಗೆ ನಮಸ್ಕಾರ ಮಾಡಬೇಕು. ಸಮಸ್ತ ಪಿತೃಪಿತಾಮಹ ಪ್ರಪಿತಾಮಹಾನಾಂ.... ಶರ್ಮಣಾಂ ಗೋತ್ರಾಣಾಂ ಧುರಿಲೋಚನ ಸಂಜ್ಞಕಾನಾಂ ತೀರ್ಥಶ್ರಾದ್ಧಂ ಕರ್ತುಂ ಮಮ ಅಧಿಕಾರ ಸಂಪದಸ್ತ್ವಿತಿ ಭವಂತೋ ಬ್ರುವಂತು । ಅಧಿಕಾರ ಸಂಪದಸ್ತು । ಕಾಲಶ್ಚ ಮುಖ್ಯ ಕಾಲೋಽಸ್ತ್ವಿತಿ ಭವಂತೋ ಬ್ರುವಂತು । ಕಾಲಶ್ಚ ಮುಖ್ಯ ಕಾಲೋಽಸ್ತು । ಪಾಕಾದೀನಾಂ ಹವಿರ್ಯೋಗ್ಯತಾಸ್ತ್ವಿತಿ ಭವಂತೋ ಬ್ರುವಂತು । ಪಾಕಾದೀನಾಂ ಹವಿರ್ಯೋಗ್ಯತಾಸ್ತು ॥ ಎಂದು ಬ್ರಾಹ್ಮಣರು ಹೇಳಬೇಕು. ಅಪಸವ್ಯದಿಂದ ಎಳ್ಳುನೀರು ಬಿಡಬೇಕು.

**ಸವ್ಯಂ** – ಸವ್ಯದಿಂದ ಪ್ರಾಣಾಯಾಮ ಮಾಡಿ ಓಂ ಆಪೋಜ್ಯೋತೀರಸೋಽಮೃತಂ ಬ್ರಹ್ಮಭೂರ್ಭುವಸ್ವರೋಮ್ ।

**ಅಪಸವ್ಯಂ** – ಅಪಸವ್ಯದಿಂದ ಸಮಸ್ತ ಪಿತೃಪಿತಾಮಹ ಪ್ರಪಿತಾಮಮಹಾನಾಂ.... ಶರ್ಮಣಾಂ.... ಗೋತ್ರಾಣಾಂ ವಸುರುದ್ರ ಆದಿತ್ಯಾಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನ ಸಂಕರ್ಷಣ ವಾಸುದೇವಾನಾಂ ತೀರ್ಥಶ್ರಾದ್ಧಂ ಸಪಾರ್ವಣಂ ಸದೈವಂ ಅನ್ನೇನ ಹವಿಷಾ ಸದ್ಯಃ ಕರಿಷ್ಯೇ । ಎಂದು ಹೇಳಿ ಎಳ್ಳು ನೀರು ಬಿಡಬೇಕು.

**ಸವ್ಯಂ** – ಸವ್ಯದಿಂದ ಧುರಿಲೋಚನ ಸಂಜ್ಞಕಾನಾಂ, ವಿಶ್ವೇಷಾಂ ದೇವಾನಾಂ ಸ್ಥಾನೇ ಆವಹನೀಯಾರ್ಥೇ ಕ್ಷಣಂದತ್ವಾ (ಸವ್ಯದಿಂದ ಅಭಿಮಂತ್ರಿಸಿದ ನೀರನ್ನು ಕೂರ್ಚದಿಂದ ತೆಗೆದುಕೊಂಡು ದೇವ ಬ್ರಾಹ್ಮಣರ ಕೈಗೆ ಕೊಡಬೇಕು.) ಭವದ್ಭಿಃ ಕ್ಷಣಃ ಪ್ರಸಾದಃ ಕರ್ತವ್ಯಃ ಸುಕರ್ತವ್ಯಃ । ಬ್ರಾಹ್ಮಣರಿಗೆ ಎರಡು ದರ್ಭೆತುಂಡು ಅಕ್ಕಿಕಾಳು ಕೊಡಬೇಕು.

**ಅಪಸವ್ಯಂ** – ಅಪಸವ್ಯದಿಂದ ಸಮಸ್ತ ಪಿತೃ ಪಿತಾಮಹ ಪ್ರಪಿತಾ ಮಹಾನಾಂ.... ಶರ್ಮಣಾಂ.... ಗೋತ್ರಾಣಾಂ ವಸುರುದ್ರ ಆದಿತ್ಯಾಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನ ಸಂಕರ್ಷಣ ವಾಸುದೇವಾನಾಂ ಸ್ಥಾನೇ ಆವಹನೀಯಾರ್ಥೇ ಕ್ಷಣಂ ದತ್ವಾ (ಕೂರ್ಚದಿಂದ ಅಭಿಮಂತ್ರಿಸಿದ ಜಲವನ್ನು ಪಿತೃ ಬ್ರಾಹ್ಮಣರಿಗೆ ಕೊಟ್ಟು) ಭವದ್ಭಿಃ ಕ್ಷಣಃ ಪ್ರಸಾದಃ ಕರ್ತವ್ಯಃ ॥ ಸುಕರ್ತವ್ಯಃ ॥ ಪಿತೃ ಬ್ರಾಹ್ಮಣರಿಗೆ ಮೂರು ದರ್ಭೆ ತುಂಡು, ಎಳ್ಳು ನೀರು ಕೊಡಬೇಕು.

**ಸವ್ಯಂ – ಸವ್ಯದಿಂದ–**

ಅಕ್ರೋಧನೈಃ ಶೌಚಪರೈಃ ಸತತಂ ಬ್ರಹ್ಮಚಾರಿಭಿಃ ।
ಭವಿತವ್ಯಂ ಭವದ್ಭಿಶ್ಚ ಮಯಾ ಚ ಶ್ರಾದ್ಧಕರ್ಮಣಿ ॥

ಎಂದು ಪ್ರಾರ್ಥಿಸಿ, ತದಂಗ ಬ್ರಾಹ್ಮಣ ಪಾದಪ್ರಕ್ಷಾಲನಂ ಕರಿಷ್ಯೇ ಕುರುಷ್ವ ಎಂದು ಬ್ರಾಹ್ಮಣರು ಹೇಳಿದ ನಂತರ ಅಕ್ಕಿಕಾಳು ನೀರು ಬಿಡಬೇಕು.

ಉತ್ತರೇ ಮಂಡಲಂ ದೈವಂ ದಕ್ಷಿಣೇ ಪೈತೃಕಂ ತಥಾ । ಮಂಡಲಂ ತು ಪ್ರಕುರ್ವೀತ ದ್ವಯೋರ್ಮಧ್ಯೇ ಷಡಂಗುಲಂ ॥

## ಪಾದಪ್ರಕ್ಷಾಲನಮ್

ತತಃ ಸವ್ಯೇನ ಬ್ರಾಹ್ಮಣ ಪಾದಪ್ರಕ್ಷಾಲನಂ ಕರಿಷ್ಯೇ ।

ಸವ್ಯದಿಂದ ಬ್ರಾಹ್ಮಣರ ಪಾದಪ್ರಕ್ಷಾಲನೆಯನ್ನು ಮಾಡಬೇಕು. ಪಾದ ಪ್ರಕ್ಷಾಲನೆಗೆ ಅರ್ಚನ ಪಾತ್ರೆಯಲ್ಲಿಯ ನೀರನ್ನು ಉಪಯೋಗಿಸಬಾರದು. ಪ್ರತ್ಯೇಕ ತಂಬಿಗೆಯಲ್ಲಿ ನೀರನ್ನು ತೆಗೆದುಕೊಂಡು ಮಾಡಬೇಕು. ಸವ್ಯದಿಂದ ಉತ್ತರ ದಿಕ್ಕಿಗೆ ನೀರಿನಿಂದ ಚೌಕಮಂಡಲವನ್ನು, ಮತ್ತು ಆರು ಅಂಗುಲ ಅಂತರದಲ್ಲಿ ಅಪಸವ್ಯದಿಂದ ದಕ್ಷಿಣದಿಕ್ಕಿಗೆ ವರ್ತುಲ ಮಂಡಲಗಳನ್ನು ಮಾಡಬೇಕು.

**ಸವ್ಯದಿಂದ** – ದೇವಪಾದ್ಯಸ್ಥಾನೇ ಇಮಾ ಆಪಃ ಇಮೇ ಯವಾಃ ಇಮೌಕುಶೌ (ಕ್ಷಿಪ್ತ್ವಾ) ಅಷ್ಟಾರ್ಘ್ಯಾಃ ಸಂಪೂರ್ಣಾಃ ಸಂತು ॥[4] ಚೌಕ ಮಂಡಲದ ಮೇಲೆ ಎರಡು ದರ್ಭೆ, ಅಕ್ಕಿಕಾಳು, ನೀರು ಹಾಕಬೇಕು. ಅದರ ಮೇಲೆ ದೊನ್ನೆಯನ್ನು ಇಟ್ಟು ಅದರಲ್ಲಿ ಬ್ರಾಹ್ಮಣರನ್ನು ಕೂಡಿಸಬೇಕು.

**ಅಪಸವ್ಯದಿಂದ** – ಪಿತೃ ಪಾದ್ಯಸ್ಥಾನೇ ಇಮಾ ಆಪಃ, ಇಮೇ ತಿಲಾಃ, ಇಮೇ ದರ್ಭಾಃ (ಕ್ಷಿಪ್ತ್ವಾ) ಅಷ್ಟಾರ್ಘ್ಯಾಃ ಸಂಪೂರ್ಣಾಃ ಸಂತು ॥ ದುಂಡು ಮಂಡಲದ ಮೇಲೆ ಮೂರು ದರ್ಭೆ, ಎಳ್ಳು ಕಾಳುಗಳು, ನೀರು ಹಾಕಬೇಕು. ಅದರ ಮೇಲೆ ದೊನ್ನೆಯಲ್ಲಿ ಇಟ್ಟು ಅದರಲ್ಲಿ ಬ್ರಾಹ್ಮಣರನ್ನು ಕೂಡಿಬೇಕು.

**ಸವ್ಯದಿಂದ** – ಚೌಕು ಮಂಡಲದ ಮೇಲೆ ದೊನ್ನೆ ಇಟ್ಟು ದೇವ ಬ್ರಾಹ್ಮಣರನ್ನು (ಪವಿತ್ರ ಇಟ್ಟು) ಕೂಡಿಸಿ ಬ್ರಾಹ್ಮಣರ ಪಾದಕ್ಕೆ 2 ದರ್ಭೆ

---

4. ಅಷ್ಟಾರ್ಘ್ಯಗಳು–ಕುಶ, ಪುಷ್ಪ, ತಿಲ, ವ್ರೀಹಿ, ಕ್ಷೀರ, ದಧ್ಯಾಜ್ಯಸರ್ಷಪಾಃ । ದರ್ಭೆ, ಪುಷ್ಪ ಎಳ್ಳು ಅಕ್ಕಿ, ಹಾಲು, ಮೊಸರು, ತುಪ್ಪ, ಬಿಳಿಸಾಸುವೆ.

ಅಕ್ಕಿಕಾಳು ಹಾಕಿ ತಂಬಿಗೆಯಲ್ಲಿಯ ನೀರನ್ನು ಹನಿ ಹನಿಯಾಗಿ ಹಾಕಬೇಕು. ಧುರಿಲೋಚನ ಸಂಜ್ಞಕಾ ವಿಶ್ವೇದೇವಾಃ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಅನಿರುದ್ಧ ನಾರಾಯಣೌ ಸ್ವಾಗತಂ ಸುಸ್ವಾಗತಂ । ಬ್ರಹ್ಮಣೇ ಭೂರ್ಭುವಃ ಸ್ವಃ । (ದೇವ ಬ್ರಾಹ್ಮಣರನ್ನು ಪೂರ್ವಾಭಿಮುಖವಾಗಿ ಕೂಡಿಸಿ ಕರ್ತೃವು ಉತ್ತರಕ್ಕೆ ಮುಖಮಾಡಿ ತೊಳೆಯಬೇಕು.) ಇತಿ ದ್ವೌ ದರ್ಭೌ ಯವಂ ಚ ಗೃಹೀತ್ವಾ ಬ್ರಾಹ್ಮಣಪಾದಸ್ಪರ್ಶಂ ಕೃತ್ವಾ ಉತ್ತರೇ ವಿಸೃಜೇತ್ । ಎರಡು ದರ್ಭೆ ಅಕ್ಕಿಕಾಳು ತೆಗೆದುಕೊಂಡು ಬ್ರಾಹ್ಮಣರ ಪಾದಕ್ಕೆ ಮುಟ್ಟಿಸಿ ಉತ್ತರ ದಿಕ್ಕಿನಲ್ಲಿ ಹಾಕಬೇಕು.

ಇದಂ ವಃ ಪಾದ್ಯಂ ಸುಪಾದ್ಯಂ ಸುಪಾದ್ಯಂ । ನಮಸ್ಕಾರಃ । ಬ್ರಾಹ್ಮಣ ಪಾದಪ್ರಕ್ಷಾಲನೆ ಮಾಡಿ ನಮಸ್ಕಾರ ಮಾಡಬೇಕು.

ಶಂ ನೋ ದೇವಿರಭಿಷ್ಟಯ ಆಪೋ ಭವಂತು ಪೀತಯೇ। ಶಂಯೋರಭಿಸ್ರವಂತು ನಃ । ಮತ್ತೆ ತೊಳೆಯಬೇಕು.

ಯದೀಚ್ಛಸಿ ಮಹಾರಾಜ ಸರ್ವತೀರ್ಥಾವಗಾಹನಮ್ ।
ವಿಪ್ರಪಾದ ವಿನಿರ್ಮುಕ್ತಂ ತೋಯಂ ಶಿರಸಿ ಧಾರಯ ॥ ಬ್ರಾಹ್ಮಣರ ಪಾದೋದಕವನ್ನು ಶಿರಸ್ಸಿನಲ್ಲಿ ಧರಿಸಬೇಕು.

ಮಂತ್ರಮಧ್ಯೇ ಕ್ರಿಯಾಮಧ್ಯೇ ವಿಷ್ಣೋಃ ಸ್ಮರಣ ಪೂರ್ವಕಂ । ಯತ್ಕಿಂಚಿತ್ ಕ್ರಿಯತೇ ಕರ್ಮ ತತ್ಕರ್ಮ ಸಫಲಂ ಕುರು ।

**ಅಪಸವ್ಯದಿಂದ** – ದುಂಡು ಮಂಡಲದ ಮೇಲೆ ದೊನ್ನೆ ಇಟ್ಟು ಪಿತೃ(ಪವಿತ್ರ) ಬ್ರಾಹ್ಮಣರನ್ನು ಕೂಡಿಸಿ 3 ದರ್ಭೆ ಎಳ್ಳು ಸ್ಪರ್ಶ ಮಾಡಿಸಿ ಅವರ ಬಲಕ್ಕೆ ಹಾಕಿ ತಂಬಿಗೆಯಲ್ಲಿಯ ನೀರನ್ನು ಹನಿ ಹನಿಯಾಗಿ ಹಾಕಬೇಕು.

ಸಮಸ್ತ ಪಿತೃ ಪಿತಾಮಹ ಪ್ರಪಿತಾಮಹಾನಾಂ.... ಶರ್ಮಾಣಃ ಗೋತ್ರಾಃ ವಸುರುದ್ರ ಆದಿತ್ಯಾಂತರ್ಗತ ಪ್ರದ್ಯುಮ್ನ ಸಂಕರ್ಷಣ ವಾಸುದೇವಾಃ ಸ್ವಾಗತಮ್ । ಸುಸ್ವಾಗತಮ್ । ಹೇಳಿ ಮೂರು ದರ್ಭೆಯ ಕಡ್ಡಿಗಳನ್ನು, ಎಳ್ಳುಗಳನ್ನು ಬ್ರಾಹ್ಮಣರ ಪಾದಕ್ಕೆ ಸ್ಪರ್ಶಮಾಡಿ ಅವರ ಬಲಗಡೆಗೆ ಹಾಕಬೇಕು.

ಪಿತೃಸ್ಥಾನ ಬ್ರಾಹ್ಮಣರನ್ನು ಪೂರ್ವಕ್ಕೆ ಮುಖಮಾಡಿ, ಕರ್ತೃವು ಪಶ್ಚಿಮಕ್ಕೆ ಮುಖಮಾಡಿ ಪಾದ ತೊಳೆಯಬೇಕು.

ಬ್ರಹ್ಮಣೇ ಭೂರ್ಭುವಸ್ವಃ । ಇದಂ ವಃ ಪಾದ್ಯಂ ಸುಪಾದ್ಯಂ । ಅಸ್ತು ಪಾದ್ಯಂ ಹೇಳಿ ಪಾದ ಪ್ರಕ್ಷಾಲನೆ ಮಾಡಿ ಸವ್ಯದಿಂದ. ನಮಸ್ಕಾರ ಮಾಡಿ, ಅಪಸವ್ಯದಿಂದ ಬ್ರಾಹ್ಮಣರ ಪಾದಕ್ಕೆ ಎರಡನೆಯ ಸಾರಿ ನೀರು ಹಾಕಬೇಕು.

ಶಂ ನೋ ದ್ದೇವಿ ರ್‍ಭಿಷ್ಟಯ್ಯ ಆಪೋ ಭವಂತು ಪೀತಯೇ। ಶಂ ಯೋ ರ್‍ಭಿಸ್ರ ವಂತುನಃ। ಯದೀಚ್ಛಸಿ ಮಹಾರಾಜ ಸರ್ವತೀರ್ಥಾವಗಾಹನಂ। ವಿಪ್ರಪಾದ ವಿನಿರ್ಮುಕ್ತಂ ತೋಯಂ – ಶಿರಸಿಧಾರಯ । ಬ್ರಾಹ್ಮಣರ ಪಾದೋದಕವನ್ನು ಶಿರಸ್ಸಿನಲ್ಲಿ ಧರಿಸಬೇಕು.

ಮಂತ್ರ ಮಧ್ಯೇ ಕ್ರಿಯಾ ಮಧ್ಯೇ ವಿಷ್ಣೋಃ ಸ್ಮರಣ ಪೂರ್ವಕಂ ।<br>
ಯತ್ಕಿಂಚಿತ್ ಕ್ರಿಯತೇ ಕರ್ಮ ತತ್ಕರ್ಮ ಸಫಲಂ ಕುರು ॥<br>
ನಾಹಂಕರ್ತಾ ಹರಿಃಕರ್ತಾ ತತ್ಪೂಜಾ ಕರ್ಮಚಾಖಿಲಂ ।<br>
ತಥಾಪಿ ಮತ್ಕೃತಾ ಪೂಜಾ ತತ್ಪ್ರಸಾದೇನ ನಾನ್ಯಥಾ ॥<br>
ನ ಜಾನೇ ಕರ್ಮ ಯತ್ಕಿಂಚಿನ್ನಾಪಿ ಲೌಕಿಕ ವೈದಿಕೇ ।<br>
ನ ನಿಷೇಧ ವಿಧೀವಿಷ್ಣೋ ತವ ದಾಸೋಽಸ್ಮಿ ಕೇವಲಂ ॥<br>
ಮಂತ್ರತಸ್ತಂತ್ರತಚ್ಛಿದ್ರಂ ದೇಶ ಕಾಲಾರ್ಹ ವಸ್ತುತಃ ।<br>
ಸರ್ವಂ ಕರೋತಿ ನ್ಯಚ್ಛಿದ್ರಂ ತವ ಸಂಕೀರ್ತನಂ ಹರೇ ॥

ಶ್ರಾದ್ಧ ಕರ್ತೃವು ಸವ್ಯದಿಂದ ಪವಿತ್ರ ಗ್ರಂಥಿಯನ್ನು ವಿಸರ್ಜಿಸಿ ದೇವಮಂಡಲದಲ್ಲಿ ಇಡಬೇಕು. ಕೈಕಾಲು ತೊಳೆದುಕೊಳ್ಳಬೇಕು, ಆಚಮನ ಮಾಡಬೇಕು.

ಕರ್ತುರಾಚಮನಂ ಪೂರ್ವಂ ಭೋಕ್ತುರಾಚಮನಂ ತಥಾ ।<br>
ಕರ್ತಾ ಕರೋತು ಈಶಾನ್ಯೇ ಆಚಮಾನಂ ಯಥಾವಿಧಿ ॥

ಮೊದಲು ಕರ್ತೃವು ಆಚಮನ ಮಾಡಿ ಆ ಮೇಲೆ ಬ್ರಾಹ್ಮಣರಿಗೆ ಆಚಮನ ಮಾಡಿಸಬೇಕು.

ಪವಿತ್ರವಂತಃ ಪರಿವಾಚಮಾಸತೇ ಪಿತೈಷಾಂ ಪ್ರತ್ನೋ ಅಭಿರಕ್ಷತಿ ವ್ರತಂ।<br>
ಮಹಃ ಸಮುದ್ರಂ ವರುಣಸ್ತಿರೋ ದಧೇ ಧೀರಾ –<br>
ಇಚ್ಛೇಕುರ್ಧರುಣೇಷ್ವಾರಭಮ್ ॥

ಪವಿತ್ರಂ ಧೃತ್ವಾ – ನೂತನ ಪವಿತ್ರವನ್ನು ಧರಿಸಿ

**ಅಪಸವ್ಯಂ** (ಅಪಸವ್ಯದಿಂದ)

ಸಮಸ್ತ ಪಿತೃಪಿತಾಮಹ ಪ್ರಪಿತಾಮಹಾನಾಂ.... ಶರ್ಮಣಾಂ.... ಗೋತ್ರಾಣಾಂ.... ವಸುರುದ್ರ ಆದಿತ್ಯಾಂತರ್ಗತ.... ಭಾರತೀರಮಣ ಮುಖ್ಯಪ್ರಾಣಾಂತರ್ಗತ- ಪ್ರದ್ಯುಮ್ನ, ಸಂಕರ್ಷಣ, ವಾಸುದೇವಾನಾಂ ತೀರ್ಥಶ್ರಾದ್ಧಕರ್ಮ ಕರಿಷ್ಯೇ (ಕುರುಷ್ವ) ಸಮಸ್ತ ಪಿತೃಗಳ ಹೆಸರುಗಳನ್ನು ಉಚ್ಚರಿಸಿ ಎಳ್ಳು ನೀರು ಬಿಟ್ಟು, ಕೈಯಲ್ಲಿ ಎಳ್ಳನ್ನು ತೆಗೆದುಕೊಂಡು 'ಅಪಹತಾ' ಕೆಳಗಿನ ಮಂತ್ರದಿಂದ ದಕ್ಷಿಣ ದಿಕ್ಕನ್ನು ಬಿಟ್ಟು ಆಗ್ನೇಯದಿಂದ ಅಪ್ರದಕ್ಷಿಣೆಯಾಗಿ ನೈಋತ್ಯದಿಕ್ಕಿನವರೆಗೆ ಎಳ್ಳನ್ನು ಹಾಕುತ್ತ ಬಲಕ್ಕೆ ಮುಗಿಸಬೇಕು.

ಅಪಹತ್ತಾ ಅಸುರ್ರಾ ರಕ್ಷಾಂಸಿ ಪ್ರಿಶಾಚಾಃ । ಯೇ ಕ್ಷಯಂತಿ ಪೃಥಿವೀಮನು । ಅನ್ಯತ್ರೇತೋ ಗಚ್ಛಂತು ಯತ್ರೈತೇಷಾಂ ಗತಂ ಮನಃ । ಯದೀರತ್ತಾಮವರ ಉತ್ಪರಾಸ ಉನ್ಮಧ್ಯಮಾಃ ಪ್ರಿತರಃ ಸ್ತೋಮ್ಯಾಸಃ । ಅಸುಂ ಯ ಈಯುರ ವೃಕಾ ಋತಜ್ಞಾ ಸ್ತೇನೋವಂತು ಪ್ರಿತರ್ರೋ ಹವೇಷು ॥

ಉತ್ತರ ದಿಕ್ಕಿಗೆ ತಿರುಗಿ ಜನಾರ್ದನನನ್ನು ಧ್ಯಾನಿಸಬೇಕು-

ಶ್ರಾದ್ಧಕಾಲೇ ಗಯಾಂ ಧ್ಯಾತ್ವಾ ಧ್ಯಾತ್ವಾದೇವಂ ಜನಾರ್ದನಮ್ ॥

ದಕ್ಷಿಣ ದಿಕ್ಕಿಗೆ ತಿರುಗಿ ಅಪಸವ್ಯದಿಂದ ವಸ್ವಾದಿಗಳನ್ನು ಧ್ಯಾನಿಸಬೇಕು-

ವಸ್ವಾದೀಂಶ್ಚ ಪಿತೃನ್ ಧ್ಯಾತ್ವಾ ತತಃ ಶ್ರಾದ್ಧಂ ಪ್ರವರ್ತತೇ ॥ (ಪ್ರವರ್ತಯ ಎಂದು ಬ್ರಾಹ್ಮಣರು ಹೇಳಬೇಕು)

ದೇಶಕಾಲಶ್ರಾದ್ಧೇ ಹವಿಯೋರ್ಗ್ಯತಾಸ್ತ್ವಿತಿ ಭವಂತೋ ಬ್ರುವಂತು ।

ದೇಶಕಾಲ ಶ್ರಾದ್ಧೇ ಹವಿಯೋರ್ಗ್ಯತಾಸ್ತು ಎಂಬುದಾಗಿ ಬ್ರಾಹ್ಮಣರು ಹೇಳಬೇಕು. ಅಪಸವ್ಯದಿಂದ ತಿಲೋದಕ (ಎಳ್ಳುನೀರು) ಬಿಡಬೇಕು.

**ಸವ್ಯದಿಂದ** ಪ್ರಾಣಾಯಾಮ ಮಾಡಬೇಕು-

ಓಂ ಆಪೋ ಜ್ಯೋತೀ ರಸೋಮೃತಂ ಬ್ರಹ್ಮಭೂರ್ಭುವಸ್ವರೋಂ ।

**ಸವ್ಯೇನ** (ಸವ್ಯದಿಂದ) ಧುರಿಲೋಚನ ಸಂಜ್ಞಕಾನಾಂ ವಿಶ್ವೇಷಾಂ ದೇವಾನಾಂ ತದಂತರ್ಯಾಮಿ-

ಅನಿರುದ್ಧ ನಾರಾಯಣೌ ಇದಮಾಸನಂ । ಕುಶಾಸನಂ ॥

(ಎರಡು ದರ್ಭೆ ತುಂಡು-ಅಕ್ಕಿಕಾಳುಗಳನ್ನು ಬ್ರಾಹ್ಮಣರ ಬಲಮೊಣಕಾಲ ಕೆಳಗೆ ಹಾಕಬೇಕು.)

### ವಿಶ್ವೇದೇವತೆಗಳ ಅರ್ಚನೆ

ಅಮೀವೋ ಗಂಧಪ್ರಸಾದಃ । ಸುಗಂಧ ಪ್ರಸಾದಃ। ಅಯಂ ಶ್ರೀ ತುಲಸೀ ಪ್ರಸಾದಃ । ಅನುಲೇಪನಾರ್ಥೇ ಗೋಪೀಚಂದನಂ । ಧಾರಣಾರ್ಥೇ ಯಜ್ಞೋಪವೀತಂ । ಫಲಾರ್ಥೇ ಪೂಗೀಫಲಂ। ಆಚ್ಛಾದನಾರ್ಥೇ- ಯನ್ಮನಸೋದ್ದಿಷ್ಟಂ ಕಿಂಚಿದ್ಧಿರಣ್ಯಂ ॥ ಪವಿತ್ರಾರ್ಥೇ ಇಮೌಕುಶೌ ॥ ಅಸ್ತು ಪವಿತ್ರಂ । ಸಕಲಾರಾಧನೈಃ ಸ್ವರ್ಚಿತಮಸ್ತು ॥ ಯುಷ್ಮದನುಜ್ಞಯಾ ಪಿತ್ರಾದ್ಯರ್ಚನಂ ಚ ಕರಿಷ್ಯೇ ॥ ಕುರುಷ್ವ ॥

ದೇವ ಬ್ರಾಹ್ಮಣರಿಗೆ ಗಂಧ, ತುಲಸೀ, ಗೋಪೀಚಂದನ, ಯಜ್ಞೋಪವೀತ, ಅಡಿಕೆಬೆಟ್ಟ, ದಕ್ಷಿಣೆ, ಪವಿತ್ರಕ್ಕಾಗಿ ಎರಡು ದರ್ಭೆ ತುಂಡುಗಳು, ಎಲ್ಲವನ್ನು ಕೊಟ್ಟು ಆರಾಧನೆಯನ್ನು ಪೂರ್ತಿಗೊಳಿಸಬೇಕು.

ನಿಮ್ಮ ಆಜ್ಞೆಯಿಂದ ಪಿತ್ರಾದಿಗಳ ಅರ್ಚನೆಯನ್ನು ಮಾಡುವೆನೆಂದು ಕೇಳಿಕೊಂಡು, ಪಿತ್ರಾದಿಗಳ ಅರ್ಚನೆ ಮಾಡಿರಿ ಎಂದು ಹೇಳಿದ ಮೇಲೆ ಪಿತೃಗಳನ್ನು ಪೂಜಿಸಬೇಕು.

### ಪಿತೃಗಳ ಅರ್ಚನೆ

**ಅಪಸವ್ಯಂ (ಅಪಸವ್ಯದಿಂದ)** ಸಮಸ್ತ ಪಿತೃ ಪಿತಾಮಹ ಪ್ರಪಿತಾಮಹಾನಾಂ.... ಶರ್ಮಣಾಂ.... ಗೋತ್ರಾಣಾಂ ವಸುರುದ್ರ ಆದಿತ್ಯಾಂತರ್ಗತ ಪ್ರದ್ಯುಮ್ನ ಸಂಕರ್ಷಣ ವಾಸುದೇವಾನಾಂ ಇದಮಾಸನಂ ಕುಶಾಸನಂ ॥ ಮೂರು ದರ್ಭೆಯ ತುಂಡುಗಳನ್ನು ಪಿತೃಬ್ರಾಹ್ಮಣರ ಕೆಳಗೆ ಹಾಕಬೇಕು.

ಅಮೀ ವೋ ಗಂಧಪ್ರಸಾಧಃ । ಸುಗಂಧ ಪ್ರಸಾಧಃ । ಅಯಂ ಶ್ರೀ ತುಲಸೀ ಪ್ರಸಾದಃ । ಅನುಲೇಪನಾರ್ಥೇ ಗೋಪೀಚಂದನಂ । ಧಾರಣಾರ್ಥೇ ಯಜ್ಞೋಪವೀತಂ । ಫಲಾರ್ಥೇ ಪೂಗೀಫಲಂ । ಆಚ್ಛಾದನಾರ್ಥೇ ಯನ್ಮಸೋದ್ದಿಷ್ಟಂ ಕಿಂಚಿದ್ಧಿರಣ್ಯಂ । ಪವಿತ್ರಾರ್ಥೇ ಇಮೇ ಕುಶಾಃ । ಅಸ್ತು ಪವಿತ್ರಂ । ಸಕಲಾರಾಧನೈಃ ಸ್ವರ್ಚಿತಮಸ್ತು ।

ಪಿತೃಬ್ರಾಹ್ಮಣರಿಗೆ ಗಂಧ, ತುಲಸೀ, ಗೋಪೀಚಂದನ, ಯಜ್ಞೋಪವೀತ, ಅಡಿಕೆ ಬೆಟ್ಟ, ದಕ್ಷಿಣೆ, ಮೂರು ದರ್ಭೆಯ ಕಡ್ಡಿಗಳನ್ನು ಕೊಟ್ಟು ಉಪಚರಿಸಬೇಕು.

ಯುಷ್ಮದನುಜ್ಞಯಾ ಮಂಡಲಾದ್ಯರ್ಚನಂ ಪಾತ್ರಾಸಾದನಂ ಚ ಕರಿಷ್ಯೇ ॥ ಕುರುಷ್ವ ॥ (ಬ್ರಾಹ್ಮಣರ ಆಜ್ಞೆಯನ್ನು ತೆಗೆದುಕೊಂಡು ಎಲೆ ಹಾಕಬೇಕು).

ಸವ್ಯದಿಂದ ದೇವ ಬ್ರಾಹ್ಮಣರಿಗೆ ಚೌಕ ಮಂಡಲವನ್ನು ಮಾಡಿ ಅಕ್ಕಿಕಾಳು, ಎರಡು ದರ್ಭೆತುಂಡು ಇಡಬೇಕು. ಅಪಸವ್ಯದಿಂದ ಪಿತೃಸ್ಥಾನ ಬ್ರಾಹ್ಮಣರಿಗೆ ವರ್ತುಲ ಮಂಡಲವನ್ನು ಮಾಡಬೇಕು. ಅದರ ಮೇಲೆ ಎಳ್ಳು. ಮೂರು ದರ್ಭೆ ತುಂಡುಗಳನ್ನು ಇಡಬೇಕು. ನಂತರ ಅವುಗಳ ಮೇಲೆ ಎಲೆಗಳನ್ನು ಹಾಕಬೇಕು.

ಅಚ್ಯುತಾಯನಮಃ । ಅನಂತಾಯ ನಮಃ । ಗೋವಿಂದಾಯ ನಮಃ ।
ಅಚ್ಯುತಾನಂತ ಗೋವಿಂದೇಭ್ಯೋ ನಮೋ ನಮಃ ॥ ನಾಮಗಳನ್ನು ಹೇಳಬೇಕು.

**ಅಪಸವ್ಯೇನ**

ಕೂರ್ಚೋದಕದಿಂದ । ದರ್ಭೈಃ । ತಿಲೈಃ । ಪುನರಪಿಜಲೈಃ । ವೈದಿಕ ಭಸ್ಮನಾ ಚ ।

ಅಪಸವ್ಯೇನ, ಅಪಸವ್ಯದಿಂದ ಈಗ ಪಿತೃಬ್ರಾಹ್ಮಣರ ಎಲೆಯ ಮುಂದೆ ಅಪ್ರದಕ್ಷಿಣಾಕಾರವಾಗಿ ಕೂರ್ಚೋದಕದಿಂದ ಮೂರು ದರ್ಭೆಗಳಿಂದ, ಎಳ್ಳುಗಳಿಂದ, ಮತ್ತೆ ಕೂರ್ಚೋದಕದಿಂದ ಪರಿಷೇಚನ ಮಾಡಬೇಕು.

ಪಿಶಂಗಭೃಷ್ಟಿಮಂಭೃಣಂ ಪಿಶಾಚಿಮಿಂದ್ರಸಂಭೃಣ । ಸರ್ವಂ ರಕ್ಷೋ ನಿಬರ್ಹಯ ॥ ಈ ಮಂತ್ರ ಹೇಳಬೇಕು.

ಸರ್ವೇಷಾಂ ಪಾಪದೃಷ್ಟೀನಾಂ ಚಕ್ಷುರ್ಬಧ್ನಾತಿ ಕೇಶವಃ । ಭಸ್ಮನಾ ಮಂಡಲಂ ಕುರ್ಯಾತ್ ಪಂಕ್ತಿದೋಷೋ ನ ವಿದ್ಯತೇ ॥

**ಸವ್ಯಂ** – ಸವ್ಯದಿಂದ ಸಪ್ತಾಂಕಿತೇನ ಭಸ್ಮನಾ ವಿಕಿರಂ ಕುರ್ಯಾತ್ ॥

ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ ।
ಅಚ್ಯುತಾನಂತ ಗೋವಿಂದೇಭ್ಯೋ ನಮಃ ॥

ಕೂರ್ಚೋದಕೈಃ । ದರ್ಭೈಃ । ಯವೈಃ । ಪುನರಪಿಜಲೈಃ । ವೈದಿಕ ಭಸ್ಮನಾಚ ।

ದೇವಬ್ರಾಹ್ಮಣರ ಎಲೆಯ ಮುಂದೆ ಪ್ರದಕ್ಷಿಣಾಕಾರವಾಗಿ ಕೂರ್ಚೋದಕದಿಂದ, ಎರಡು ದರ್ಭೆಗಳಿಂದ, ಅಕ್ಕಿಕಾಳುಗಳಿಂದ, ಮತ್ತೆ ಕೂರ್ಚೋದಕದಿಂದ ಭಸ್ಮದಿಂದ ಪರಿಷೇಚನ ಮಾಡಬೇಕು.

ರಕ್ಷಾಣೋ ಅಗ್ನೇ ತವ ರಕ್ಷಣೇಭಿರಾರಕ್ಷಾಣಃ ಸುಮುಖ ಪ್ರೀಣಾನಃ ।

ಪ್ರತಿಷ್ಫುರ ವಿರುಜವೀಡ್ವಂಹೋ ಜಹಿ ರಕ್ಷೋ ಮಹಿ ಚಿದ್ವಾವೃಧಾನಂ ॥

ಸರ್ವೇಷಾಂ ಪಾಪದೃಷ್ಟೀನಾಂ ಚಕ್ಷುರ್ಬಧ್ನಾತಿ ಕೇಶವಃ । ಭಸ್ಮನಾ ಮಂಡಲಂ ಕುರ್ಯಾತ್ ಪಂಕ್ತಿದೋಷೋ ನ ವಿದ್ಯತೇ ॥ ಆಚಮನದ ನೀರನ್ನು ಕಣ್ಣಿಗೆ ಹಚ್ಚಿಕೊಳ್ಳಬೇಕು.

ಅದ್ಯ ಪೂರ್ವೋಚ್ಚರಿತ ಏವಂಗುಣ ವಿಶೇಷಣ ವಿಶಿಷ್ಟಾಯಾಂ ಪುಣ್ಯತಿಥೌ– ತೀರ್ಥಶ್ರಾದ್ಧೇ ಭವದನುಜ್ಞಯಾ ಭವತ್ಸೇವಯಾ ವಿಪ್ರಪಾಣೌ ಹೋಮಂ ಕರಿಷ್ಯೇ ॥ ಕುರುಷ್ವ ॥ (ಕರ್ತೃವು ಬ್ರಹ್ಮಚಾರಿ ಅಥವಾ ವಿಧುರನಾಗಿದ್ದರೆ ದೇವಪಾತ್ರದಲ್ಲಿ ಪಾಣಿಹೋಮವನ್ನು ಮಾಡಬೇಕು).

ದೊನ್ನೆಯಲ್ಲಿ ವೈಶ್ವದೇವ ಶೇಷದ ಅನ್ನವನ್ನು ತೆಗೆದುಕೊಂಡು ಅಭಿಘಾರ ಮಾಡಿ (ತುಪ್ಪ ಹಾಕಿ) ದರ್ಭೆಯಿಂದ ಅನ್ನವನ್ನು ಎರಡು ಭಾಗಮಾಡಿ ಅದರ ಪೂರ್ವಭಾಗ ತೆಗೆದುಕೊಂಡು **ಅಪಸವ್ಯಂ** ಅಪಸವ್ಯದಿಂದ ಅನ್ನಮಾದಾಯ । ಅನ್ನಮಭಿಘಾರ್ಯ । ಅನ್ನಂ ದ್ವೇಧಾ ವಿಭಜ್ಯ । ತತ್ರ ಪೂರ್ವಭಾಗಮಾದಾಯ ಸವ್ಯೇನ ಗೃಹೀತ್ವಾ ಅಪಸವ್ಯೇನ ಹೋಮಃ ॥ ಸವ್ಯದಿಂದ ತೆಗೆದುಕೊಂಡು ಅಪಸವ್ಯದಿಂದ ಹೋಮಮಾಡಬೇಕು.

ದೊನ್ನೆಯಲ್ಲಿಯ ಪೂರ್ವಭಾಗದ ಅನ್ನವನ್ನು ಸವ್ಯದಿಂದ ತೆಗೆದುಕೊಂಡು ಬಲಗೈಯನ್ನು ಅನ್ನಸಹಿತ ಜನಿವಾರದಿಂದ ತೆಗೆದು ಮಾಲಾಕಾರವಾಗಿ ನಂತರ ಅಪಸವ್ಯವಾಗಿ ಎಡಗೈಯನ್ನು ಪಿತೃ ಎಲೆಯ ಮೇಲೆ ಇಟ್ಟು ಬಲಗೈಯನ್ನು ಎಡಗೈ ಕೆಳಗೆ ತಂದು ಪಿತೃತೀರ್ಥದಿಂದ ಅನ್ನವನ್ನು, ಎಲೆಯನ್ನು ಬಿಡದೇ **ಅಪಸವ್ಯದಿಂದ ಸೋಮಾಯ ಪಿತೃಮತೇ ಸ್ವಧಾ ನಮಃ** । ಹೇಳಿ ಹೋಮ ಮಾಡಬೇಕು. (ಎಲೆಯಲ್ಲಿ ಅನ್ನ ಹಾಕಬೇಕು)

ಸೋಮಾಯ ಪಿತೃಮತ ಇದಂ ನ ಮಮ ॥ ಹೇಳಬೇಕು. ನಂತರ

ಎಲೆ ಬಿಡಲಾರದೆ ಸವ್ಯವಾಗಿ ಅಂದರೆ ಬಲಗೈಯನ್ನು ಎಲೆಯ ಮೇಲಿಟ್ಟು ಎಡಗೈಯನ್ನು ಜನಿವಾರದಿಂದ ತೆಗೆದು ಮಾಲಾಕಾರವಾಗಿ ಮತ್ತೆ ಎಡಗೈಯನ್ನು ಎಲೆಯ ಮೇಲಿಟ್ಟು ಬಲಗೈಯನ್ನು ಎಲೆಯ ಮೇಲಿಂದ ತೆಗೆದು ಜನಿವಾರದಲ್ಲಿ ಹಾಕಿ ಸವ್ಯವಾಗಿ ಪೂರ್ವದಿಕ್ಕಿನ ಅನ್ನವನ್ನು ತೆಗೆದುಕೊಂಡು ಜನಿವಾರದಿಂದ ಬಲಗೈಯನ್ನು ಹೊರಗೆ ತೆಗೆದು

ಮಾಲಾಕಾರವಾಗಿ ಅನ್ನ ಸಹಿತ ಬಲಗೈಯನ್ನು ಎಲೆಯ ಮೇಲಿಟ್ಟು ಎಡಗೈಯನ್ನು ಎಲೆಯ ಮೇಲಿಂದ ತೆಗೆದು ಜನಿವಾರದಲ್ಲಿ ಹಾಕಿ ಅಪಸವ್ಯವಾಗಿ ಎಲೆಯ ಮೇಲಿಟ್ಟು ಬಲಗೈಯನ್ನು ಎಡಗೈ ಕೆಳಗೆ ತಂದು–

ಅಗ್ನಯೇ ಕವ್ಯವಾಹನಾಯ ಸ್ವಧಾ ನಮಃ । ಎನ್ನುತ್ತ ಹೋಮ ಮಾಡಬೇಕು. (ಎಲೆಯಲ್ಲಿ ಅನ್ನ ಹಾಕಬೇಕು)

ಇದಂ ಅಗ್ನಯೇ ಕವ್ಯವಾಹನಾಯ ನ ಮಮ ॥ ಹೇಳಬೇಕು.

ಸವ್ಯದಿಂದ, ಕೂರ್ಚದಿಂದ ಊಟದ ಎಲೆಗೆ ನೀರನ್ನು ಸಿಂಪಡಿಸಿ–

ಗೋತ್ರೋಚ್ಚಾರ್ಯ । ಅಪಸವ್ಯೇನ ಸ್ವಧೇಯಂ । ಸುಸ್ವಧೇಯಂ । ಸವ್ಯೇನ ಪಾತ್ರಾಭಿಘಾರಂ ಕುರ್ಯಾತ್ ॥ ಗೋತ್ರೋಚ್ಚಾರಗಳನ್ನು ಮಾಡಿ ಎಲೆಗೆ ತುಪ್ಪ ಬಡಿಸಬೇಕು.

ಪಾತ್ರಪರಿವೇಷಣಂ । ಅನ್ನಸೂಕ್ತಂ ಪಠೇತ್ ॥ ದೇವಸ್ಥಾನಕ್ಕೆ ಮೊದಲು ಬಡಿಸಬೇಕು. ಮೊದಲು ಅನ್ನ, ಪಾಯಸ, ಭಕ್ಷ್ಯ, ತುಪ್ಪ, ವ್ಯಂಜನ ಪದಾರ್ಥಗಳು, ಕೊನೆಗೆ ತೊವ್ವೆ ಬಡಿಸಬೇಕು.

ಮೂರ್ಧಾನಂ ದಿವೋ ಅರತಿಂ ಪೃಥಿವ್ಯಾ ವೈಶ್ವಾನರ ಮೃತ ಆ ಜಾತಮಗ್ನಿಂ ।
ಕವಿಂ ಸಮ್ರಾಜಮತಿಥಿಂ ಜನಾನಾಮಾಸನ್ನಾಪಾತ್ರಂ ಜನಯಂತ ದೇವಾಃ ॥
ಚತುಷ್ಕಪರ್ದಾ ಯುವತಿಃ ಸುಪೇಶಾಃ ಘೃತಪ್ರತೀಕಾ ವಯುನಾನಿವಸ್ತೇ ।
ತಸ್ಯಾಂ ಸುಪರ್ಣಾ ವೃಷಣಾ ನಿಷೇದತುರ್ಯತ್ರ ದೇವಾ ದಧಿರೇ ಭಾಗಧೇಯಮ್ ॥
ಸ್ವಾದೋ ಪಿತೋ ಮಧೋ ಪಿತೋ ವಯಂತ್ವಾ ವವೃಮಹೇ । ಅಸ್ಮಾಕಮವಿತಾ ಭವ ॥

ದೇವತಾಭ್ಯಃ ಪಿತೃಭ್ಯಶ್ಚ ಮಹಾಯೋಗಿಭ್ಯ ಏವ ಚ ।
ನಮಃ ಸ್ವಾಹಾಯ್ಯೈ ಸ್ವಧಾಯ್ಯೈ ನಿತ್ಯಮೇವ ನಮೋ ನಮಃ ॥

ಸಪ್ತವ್ಯಾಧಾ ದಶಾರ್ಣೇಷು ಮೃಗಾಃ ಕಾಲಂಜರೇಗಿರೌ ।
ಚಕ್ರವಾಕಾಃ ಶರದ್ವೀಪೇ ಹಂಸಾಃ ಸರಸಿಮಾನಸೇ ॥

ಯೇऽಸ್ಮಿನ್ ಜಾತಾಃ ಕುರುಕ್ಷೇತ್ರೇ ಬ್ರಾಹ್ಮಣಾ ವೇದಪಾರಗಾಃ ।
ಪ್ರಸ್ಥಿತಾ ದೀರ್ಘಮಧ್ವಾನಂ ಯೂಯಂ ತೇಭ್ಯೋऽವಸೀದಥ ॥
ಅಮೂರ್ತಾನಾಂ ಚ ಮೂರ್ತಾನಾಂ ಪಿತೃಣಾಂ ದೀಪ್ತತೇಜಸಾಂ ।
ನಮಸ್ಯಾಮಿ ಸದಾ ತೇಷಾಂ ಧ್ಯಾಯಿನಾಂ ಯೋಗಚಕ್ಷುಷಾಂ ॥
ಚತುರ್ಭಿಶ್ಚ ಚತುರ್ಭಿಶ್ಚ ದ್ವಾಭ್ಯಾಂ ಪಂಚಭಿರೇವ ಚ ।
ಹೂಯತೇ ಚ ಪುನರ್ದ್ವಾಭ್ಯಾಂ ಸಮೇ ವಿಷ್ಣುಃ ಪ್ರಸೀದತು ॥
ಅನ್ನಂ ಗಾಯತ್ರ್ಯಾ ತೀರ್ಥೇನ ಪ್ರೋಕ್ಷ್ಯ । ಸತ್ಯಂ ತ್ವರ್ತೇನ ಪರಿಷಿಂಚಾಮಿ ।
ದೇವ ಸವಿತುಃ ಪ್ರಸುವ ॥

ಎಲ್ಲ ಪದಾರ್ಥಗಳನ್ನು ಎಲೆಗೆ ಬಡಿಸಿದ ನಂತರ ದೇವಬ್ರಾಹ್ಮಣರ ಎಲೆಗೆ ಗಾಯತ್ರೀ ಮಂತ್ರದಿಂದ ತೀರ್ಥವನ್ನು ಪ್ರೋಕ್ಷಿಸಿ ಪ್ರದಕ್ಷಿಣಾಕಾರವಾಗಿ ಕೂರ್ಚತೆಗೆದುಕೊಂಡು ಪರಿಷೇಚನವನ್ನು ಮಾಡಿ–

**ಸವ್ಯದಿಂದ**

ಬ್ರಹ್ಮಾರ್ಪಣಂ ಬ್ರಹ್ಮಹವಿರ್ಬ್ರಹ್ಮಾಗ್ನೌ ಬ್ರಹ್ಮಣಾ ಹುತಂ ।
ಬ್ರಹ್ಮೈವ ತೇನ ಗಂತವ್ಯಂ ಬ್ರಹ್ಮಕರ್ಮ ಸಮಾಧಿನಾ ॥

ದೇಶ ಕಾಲ ಪಾತ್ರ ಮಂತ್ರ ತಂತ್ರ ಕರ್ಮ ಕರ್ತೃ ಭೋಕ್ತೃದ್ರವ್ಯೈಃ ಸರ್ವಂ ನ್ಯೂನಾತಿರಿಕ್ತಾನ್ಯಚ್ಛಿದ್ರಮಸ್ತ್ವಿತಿ ಭವಂತೋ ಬ್ರುವಂತು । ನ್ಯೂನಾತಿರಿಕ್ತಾನ್ಯಚ್ಛಿದ್ರಮಸ್ತು ॥ (ಯವೋದಕಂ) ಅಕ್ಕಿಕಾಳು ನೀರು ಬಿಡಬೇಕು.

**ಅಪಸವ್ಯದಿಂದ**

ವರ್ತಮಾನೇ ಕೃಷ್ಣಾತೀರೇ (ತೀರ್ಥದ ಹೆಸರು) ತಾನ್ ಉದ್ದಿಶ್ಯ ಮಯಾಕ್ರಿಯಮಾಣೇ ಸಮಸ್ತ ಪಿತೃಪಿತಾಮಹ ಪ್ರಪಿತಾಮಹಾನಾಂ ಶರ್ಮಣಾಂ ಗೋತ್ರಾಣಾಂ ವಸುರುದ್ರಾದಿತ್ಯಾಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನ ಸಂಕರ್ಷಣ ವಾಸುದೇವಾನಾಂ ತೀರ್ಥಶ್ರಾದ್ಧೇ ಬ್ರಾಹ್ಮಣಮುಖೇ ಅನ್ನೋದಕ ದಾನೇನೈವ ಅಕ್ಷಯ ತುಷ್ಟಿರಸ್ತ್ವಿತಿ ಭವಂತೋ ಬ್ರುವಂತು । ಅನ್ನೋದಕದಾನೇನೈವ ಅಕ್ಷಯತುಷ್ಟಿರಸ್ತು ॥ ತಿಲೋದಕಂ ॥ ಎಳ್ಳು ನೀರು ಬಿಡಬೇಕು.

